


ಕನ್ನಡ ವಿಶ್ವವಿದ್ಯಾಲಯ

ಹಂಪಿ


೨೦೧೧-೧೨ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಉತ್ತನಹಳ್ಳಿ - ಒಂದು ಸಾಂಸ್ಕೃತಿಕ ಅಧ್ಯಯನ


ನಿಬಂಧಕಾರರು

**ನಂಜುಂಡಸ್ವಾಮಿ ಎನ್.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಡಿ. ಸುಮಂಗಳ**

ಕನ್ನಡ ಸಹ ಪ್ರಾಧ್ಯಾಪಕರು
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು
ಮೈಸೂರು





ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೨



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೧-೧೨ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಉತ್ತನಹಳ್ಳಿ - ಒಂದು ಸಾಂಸ್ಕೃತಿಕ ಅಧ್ಯಯನ

ನಿಬಂಧಕಾರರು

**ನಂಜುಂಡಸ್ವಾಮಿ ಎನ್.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಡಿ. ಸುಮಂಗಳ**

ಕನ್ನಡ ಸಹ ಪ್ರಾಧ್ಯಾಪಕರು

ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು

ಮೈಸೂರು

**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

ಜಯಲಕ್ಷ್ಮೀಪುರಂ, ಮೈಸೂರು

೨೦೧೨

# ಅಭ್ಯರ್ಥಿಯ ಘೋಷಣಾ ಪತ್ರ

**"ಉತ್ತನಹಳ್ಳಿ – ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ **KVTMKS/00527**ರ ವಿದ್ಯಾರ್ಥಿ ಆದ ನಾನು ೨೦೧೧–೧೨ನೇ ಸಾಲಿನ ಪರೀಕ್ಷೆಗಾಗಿ ಡಾ. ಡಿ.ಸುಮಂಗಳ, ಕನ್ನಡ ಸಹಪ್ರಾಧ್ಯಾಪಕರು, ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು, ಮೈಸೂರು ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮೈಸೂರು**
ದಿನಾಂಕ: ೩೦–೦೫–೨೦೧೨

(ನಂಜುಂಡಸ್ವಾಮಿ ಎನ್.)
೨೦೧೧–೧೨ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ದೃಢೀಕರಣ ಪತ್ರ

೨೦೧೧-೧೨ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS/00527**ರ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ನಂಜುಂಡಸ್ವಾಮಿ ಎನ್.** ಅವರು ನನ್ನ ಮಾರ್ಗದರ್ಶನದಲ್ಲಿ **"ಉತ್ತನಹಳ್ಳಿ - ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
೩೦-೦೫-೨೦೧೨

**(ಡಾ. ಡಿ. ಸುಮಂಗಳ)**
ಮಾರ್ಗದರ್ಶಕರು
ಕನ್ನಡ ಸಹ ಪ್ರಾಧ್ಯಾಪಕರು
ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜು
ಮೈಸೂರು

# ಉತ್ತನಹಳ್ಳಿ – ಒಂದು ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ



*****

## ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ಸ್ಥಳದ ಸಾಂಸ್ಕೃತಿಕ ಅಧ್ಯಯನದಲ್ಲಿ ಅತ್ಯಂತ ಪ್ರಮುಖವಾದುದು ಮತ್ತು ಮೂಲಭೂತವಾದದ್ದು ಕ್ಷೇತ್ರಕಾರ್ಯ. ಜಾನಪದದ ಎಲ್ಲಾ ಮುಖಗಳನ್ನು ಅದರ ವಾಸ್ತವಾರ್ಥದಲ್ಲಿ ಅರಿಯಲು ಕ್ಷೇತ್ರ ಕಾರ್ಯವನ್ನು ಬಿಟ್ಟರೆ ಬೇರೊಂದು ಮಾರ್ಗವಿಲ್ಲವೆಂದೇ ಹೇಳಬೇಕು. ಬಹಳ ಕಾಲದವರೆಗೆ ಜಾನಪದವನ್ನೂ ಕ್ಷೇತ್ರ ವಿಜ್ಞಾನವೆಂದು ಕರೆಯಲು ಹಿಂಜರಿಯುತ್ತಿದ್ದರು. ಆದರೆ ಈಗ ಆ ಪರಿಸ್ಥಿತಿ ಇಲ್ಲ. ಬೇರೆ ಬೇರೆಕಡೆಗಳಲ್ಲಿ ನಡೆದಿರುವ ಸಂಶೋಧನೆಗಳು ಜಾನಪದವೂ ಒಂದು ಕ್ಷೇತ್ರ ವಿಜ್ಞಾನ ಎಂಬುದನ್ನು ತೋರಿಸಿಕೊಟ್ಟಿದೆ. ಕ್ಷೇತ್ರ ವಿಜ್ಞಾನಗಳೇ ಮಾನವಶಾಸ್ತ್ರ, ಭೂಗೋಳಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಪ್ರಾಕ್ತನಶಾಸ್ತ್ರ, ಸಮಾಜಶಾಸ್ತ್ರಗಳನ್ನು ಪರಿಗಣಿಸಲಾಗಿದೆ. ಇವುಗಳಲ್ಲಿ ಪ್ರತಿಯೊಂದಕ್ಕೂ ವಸ್ತು ಸಂಗ್ರಹಾಲಯದಲ್ಲಿ, ಪ್ರಯೋಗಶಾಲೆಯಲ್ಲಿ ಮತ್ತು ಗ್ರಂಥ ಭಂಡಾರದಲ್ಲಿ ಸಾಕಷ್ಟು ಅಧ್ಯಯನ ಮಾಡಬಹುದಾದರೂ ಕ್ಷೇತ್ರ ಪರಿವೀಕ್ಷಣೆಯಿಲ್ಲದೆ ಸಂಪೂರ್ಣವಾಗುವುದಿಲ್ಲ ಎಂಬುದು ಮುಖ್ಯವಾದ ವಿಚಾರ. ಈ ಸಂದರ್ಭದಲ್ಲಿ ಜಾನಪದ ಕ್ಷೇತ್ರಕಾರ್ಯ ತುರ್ತಾಗಿ ನಡೆಯಬೇಕಾಗಿದೆ. ಕ್ಷೇತ್ರ ಕಾರ್ಯದ ಮಾಹಿತಿಗಳಿಲ್ಲದೆ ಜಾನಪದವು ಒಂದು ಶಿಸ್ತಾಗಿ ಬೆಳೆಯಲು ಸಾಧ್ಯವೇ ಇಲ್ಲ. ಇತಿಹಾಸಕಾರನಿಗೆ ಚಾರಿತ್ರಿಕ ಆಕರಗಳು, ಸಾಹಿತ್ಯ ವಿಮರ್ಶಕರಿಗೆ ಕಾಲಕೃತಿಗಳು ಹೇಗೋ, ಮಾನವಶಾಸ್ತ್ರಜ್ಞನಿಗೆ ಮನುಷ್ಯರು ಹೇಗೋ, ಅಂತೆಯೇ ಜಾನಪದ ಸಾಹಿತ್ಯಕ್ಕೂ ಕ್ಷೇತ್ರ ಕಾರ್ಯದ ಮಾಹಿತಿಗಳು ಬೇಕು. ಆದ್ದರಿಂದಲೇ ಜಾನಪದ ಅಧ್ಯಯನದ ಮೊದಲ ಉದ್ದೇಶ ಮತ್ತು ಮುಖ್ಯ ಕೆಲಸ ಕ್ಷೇತ್ರಕಾರ್ಯ.

ಪ್ರಸ್ತುತ ಅಧ್ಯಯನದ ಉದ್ದೇಶ ಪ್ರಮುಖವಾಗಿ ಒಂದು ಗ್ರಾಮದಲ್ಲಿನ ಜಾನಪದೀಯ ಅಂಶಗಳನ್ನು ತೆಗೆದುಕೊಂಡು ಗ್ರಾಮೀಣ ಸಂಸ್ಕೃತಿಯ ಆಂತರಿಕ ಮತ್ತು ಬಾಹ್ಯ ಅಂಶಗಳನ್ನು ಮತ್ತು ಜಾನಪದ ಸಾಹಿತ್ಯದಲ್ಲಿನ ಹಲವಾರು ಅಂಶಗಳನ್ನು ಸಾಧ್ಯವಾದಷ್ಟು ಕೂಲಂಕಷವಾಗಿ ಅಧ್ಯಯನ ಮಾಡಿ ಪ್ರಾದೇಶಿಕ ವೈಶಿಷ್ಟತೆಯನ್ನು ತಿಳಿದುಕೊಳ್ಳುವುದು ಈ ನಿಬಂಧದ ಪ್ರಮುಖ ಉದ್ದೇಶವಾಗಿದೆ.

ನಮ್ಮ ನಾಡು ಹಳ್ಳಿಗಳ ಬೀಡು, ತಾಯಿ ಭಾರತಿಯ ಹೃದಯ ಎಂದರೆ ಹಳ್ಳಿಗಳ ಸಮುಚ್ಚಯ. ಕನ್ಯಾಕುಮಾರಿಯಿಂದ ಕಾಶ್ಮೀರದ ತನಕ ಎತ್ತನೋಡಲಿ ಅತ್ತ

ಗ್ರಾಮ ಸಮುದಾಯಗಳಿವೆ. ಭಾರತೀಯ ಬದುಕಿಗೂ ಹಳ್ಳಿಗಾಡಿಗೂ ಎಡೆಬಿಡದ ನಂಟು. 'ಜನವಾಣಿ ಬೇರು ಕವಿವಾಣಿ ಹೂವು' ಎಂಬ ಬಿ.ಎಂ.ಶ್ರೀಯವರ ಹೇಳಿಕೆಯಂತೆ ಜನಪದ ನಿತ್ಯ ನೂತನತೆಯಿಂದ ಕೂಡಿದ ಜಲಧಾರೆ. ಜನಪದ ಅಧ್ಯಯನ ಎಂಬುದು ಹಳ್ಳಿಗಳ ಜನಾಂಗ, ಸಂಸ್ಕೃತಿ, ಆಚಾರ ವಿಚಾರ ಮತ್ತು ಸಂಪ್ರದಾಯಗಳನ್ನು ಕುರಿತ ಅಧ್ಯಯನ. ಜಾನಪದ ಕ್ಷೇತ್ರ ವಿಶಾಲವೂ, ವ್ಯಾಪಕವೂ ಸರ್ವಾತ್ಮಕವೂ ಆಗಿದ್ದು ಸಂಶೋಧಕರಿಗೆ ಹೇರಳ ಸಾಮಗ್ರಿ ಒದಗಿಸುತ್ತದೆ. ಜಾನಪದದ ಕುಕ್ಷಿಯಲ್ಲಿ ಜಗತ್ತೆಲ್ಲ ಹುದುಗಿದೆ.

ಕರ್ನಾಟಕ ಜನಪದ ಅಧ್ಯಯನದಲ್ಲಿ ಗ್ರಾಮ ಜೀವನದ ಅಧ್ಯಯನಕ್ಕೆ ಆರಂಭ ದೊರಕಿದ್ದು ೧೯೩೩ರಲ್ಲಿ ಅರ್ಚಕ ಬಿ.ರಂಗಸ್ವಾಮಿಯವರ 'ಹುಟ್ಟಿದಹಳ್ಳಿ' ಹಳ್ಳಿಯ ಹಾಡುಗಳ ಮೂಲಕವೇ. ನಂತರದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಲ್.ಗುಂಡಪ್ಪನವರು, ಬೆಟಗೇರಿ ಕೃಷ್ಣಶರ್ಮರು ಮುಂತಾದವರು ಈ ನಿಟ್ಟಿನಲ್ಲಿ ಕೆಲಸ ಮಾಡಿದ್ದಾರೆ.

ಈ ಬಗೆಯ ಅಧ್ಯಯನಗಳಲ್ಲಿ ಹಳ್ಳಿಯ ಜನರ ಜೀವನ, ಅವರ ಆಚರಣೆ, ನಡೆ, ನುಡಿ, ನಂಬಿಕೆ, ಸಾಹಿತ್ಯ ಪ್ರಕಾಶಗಳು ಕಲೆ, ಸಂಪ್ರದಾಯ, ಆರ್ಥಿಕ ಸ್ಥಿತಿಗತಿ, ಹಬ್ಬ, ಜಾತ್ರೆಗಳು ಇತ್ಯಾದಿ ವಿಚಾರಗಳನ್ನು ಅಭ್ಯಸಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಗ್ರಾಮೀಣ ವಿದ್ಯಾರ್ಥಿಯಾಗಿರುವ ನಾನು ಜನಪದ ಸಾಹಿತ್ಯದ ವಿದ್ಯಾರ್ಥಿಯೂ ಆಗಿರುವುದರಿಂದ ಗ್ರಾಮಜೀವನದ ಅಧ್ಯಯನ ನಡೆಸಲು ತೀರ್ಮಾನಿಸಿದೆ.

ನಾನು ಮೈಸೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಉತ್ತನಹಳ್ಳಿಯಲ್ಲಿ ಜನಿಸಿದ್ದು ಅಲ್ಲಿಯ ಕೆಲವು ಆಚರಣೆ, ಜನಜೀವನ ವ್ಯವಸ್ಥೆ ಮುಂತಾದವುಗಳನ್ನು ಕಂಡು ಕೇಳಿದ ನೆನಪುಗಳೊಂದಿಗೆ ಮತ್ತು ಹಂಪಿ ವಿಶ್ವವಿದ್ಯಾನಿಲಯವು ನಿಬಂಧವನ್ನು ಬರೆಯಬೇಕೆಂದು ಸೂಚಿಸಿರುವುದರಿಂದ 'ಉತ್ತನಹಳ್ಳಿ - ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ನಿಬಂಧದ ಮೂಲಕ ಈ ಗ್ರಾಮದ ಜನಜೀವನ ವ್ಯವಸ್ಥೆ, ಪ್ರಮುಖ ದೇವಾಲಯಗಳು, ಆಚರಣೆಗಳು, ನಂಬಿಕೆಗಳು ಮುಂತಾದವುಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುವ ಉದ್ದೇಶದಿಂದ ಈ ನಿಬಂಧವನ್ನು ರಚಿಸುತ್ತಿದ್ದೇನೆ.

ಮೈಸೂರು ರಾಜಮನೆತನದ ಅಧಿದೇವತೆಯಾದ ಶ್ರೀ ಚಾಮುಂಡೇಶ್ವರಿಯ ಸಹೋದರಿ ಶ್ರೀ ಜ್ವಾಲಾಮುಖಿ ತ್ರಿಪುರಸುಂದರಿಯ ದೇವಸ್ಥಾನ ಈ ಹಳ್ಳಿಯ ಕೇಂದ್ರಬಿಂದು. ಇಂದಿಗೂ ಈ ದೇವಿ 'ಉತ್ತನಹಳ್ಳಿಮಾರಮ್ಮ' ಎಂದು ಪ್ರಸಿದ್ಧಿಯನ್ನು

ಪಡೆದಿರುವ ಕಾರಣ ಈ ದೇವಿಯನ್ನು ಸಂಪೂರ್ಣವಾಗಿ ತಿಳಿದುಕೊಳ್ಳುತ್ತಾ ಸ್ಥಳ ಮಹಾತ್ಮೆಯ ಜೊತೆಗೆ ಈ ಹಳ್ಳಿಯ ಜನಜೀವನ ಸ್ಥಿತಿಗತಿಯ ಆಚರಣೆ, ಸಂಪ್ರದಾಯಗಳನ್ನು ಸಂಕ್ಷಿಪ್ತವಾಗಿ ತಿಳಿಸುವುದೇ ಈ ನಿಬಂಧದ ಉದ್ದೇಶ.

ಈ ನಿಬಂಧದಲ್ಲಿ ಒಟ್ಟು ಆರು ಅಧ್ಯಾಯಗಳಿದ್ದು ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಎರಡನೇ ಅಧ್ಯಾಯದಲ್ಲಿ ಭೌಗೋಳಿಕ ಹಿನ್ನೆಲೆ, ಮೂರನೇ ಅಧ್ಯಾಯದಲ್ಲಿ ಅಲ್ಲಿಯ ಜನರ ಸಾಮಾಜಿಕ ಮತ್ತು ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳು, ನಾಲ್ಕನೇ ಅಧ್ಯಾಯದಲ್ಲಿ ಉತ್ತನಹಳ್ಳಿಯ ದೇವಸ್ಥಾನಗಳ ಹುಟ್ಟು ಮತ್ತು ಬೆಳವಣಿಗೆ, ಐದನೇ ಅಧ್ಯಾಯದಲ್ಲಿ ಜಾತ್ರೆಗಳು ಮತ್ತು ಉತ್ಸವಗಳು, ಆರನೇ ಅಧ್ಯಾಯದಲ್ಲಿ ಸಾಂಸ್ಕೃತಿಕ ಹಿನ್ನೆಲೆ ಮತ್ತು ಉಪಸಂಹಾರಗಳನ್ನು ಒಳಗೊಂಡಿದೆ.

ಈ ನಿಬಂಧವು ಈ ಗ್ರಾಮದ ವ್ಯಾಪ್ತಿಯಲ್ಲಿ ಕಂಡುಬರುವ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಮಟ್ಟಗಳ ವ್ಯಾಪ್ತಿಯನ್ನು ತಿಳಿಸುವುದಲ್ಲದೇ ಈ ಗ್ರಾಮ ಮೊದಲಿನಿಂದಲೂ ತನ್ನಲ್ಲಿರುವ ಜನಪದ ಅಂಶಗಳನ್ನು ಹೇಗೆ ಕೆಲವೆಡೆ ಕಾಪಾಡಿಕೊಂಡು ಬರುತ್ತಿದೆಯೋ ಅದರಲ್ಲೂ ಆಧುನಿಕತೆಯ ಪ್ರಭಾವದಿಂದಾಗಿ ಜನಪದ ಅಂಶಗಳನ್ನು ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಉತ್ತನಹಳ್ಳಿಯ ಗ್ರಾಮದ ಕೊಡುಗೆ ತಿಳಿಯುವುದರ ಜತೆಗೆ ಮೆಕ್ಕೆ ಹಬ್ಬದ ಪೂರ್ವಾಪರವನ್ನು ಇಲ್ಲಿ ಚರ್ಚಿಸಲಾಗಿದೆ.

# ಅಧ್ಯಾಯ -೨

# ಉತ್ತನಹಳ್ಳಿಯ ಭೌಗೋಳಿಕ ಮತ್ತು ಐತಿಹಾಸಿಕ ಮಾಹಿತಿ ಮತ್ತು ಸ್ಥಳನಾಮ

ಪ್ರಕೃತಿ ಸೌಂದರ್ಯದ ನೆಲೆವೀಡಾದ ಕರ್ನಾಟಕದಲ್ಲಿ ಕಂಗೊಳಿಸುವ ಮೈಸೂರು ಭವ್ಯವಾದ ಇತಿಹಾಸ, ಸಂಸ್ಕೃತಿ, ಪರಂಪರೆಗಳಿಂದೊಡಗೂಡಿದ್ದು ರಾಜ್ಯದಲ್ಲೇ ಒಂದು ಪ್ರಮುಖ ಸ್ಥಾನವನ್ನು ಪಡೆದಿದೆ. ಭಾರತೀಯ ಸಾಹಿತ್ಯ ಸಂಸ್ಕೃತಿಗಳ ಸಾಮರಸ್ಯದ ಪ್ರತೀಕವಾಗಿರುವ ಮೈಸೂರು ಜಿಲ್ಲೆಯಲ್ಲಿ ಎಲ್ಲಾ ಧರ್ಮಗಳ ಜನರು ಶಾಂತಿಯಿಂದ ಬಾಳುತ್ತಿದ್ದಾರೆ. ಗಿರಿ, ಕಾನನ, ಹರಿಯುವ ನದಿಗಳು, ವೈವಿಧ್ಯಮಯವಾದ ಪ್ರಾಣಿ ಸಂಪತ್ತು, ಪಕ್ಷಿ ಸಂಕುಲಗಳು, ಪುರಾತನ ಪಟ್ಟಣಗಳು, ಐತಿಹಾಸಿಕ ಹಿನ್ನೆಲೆ ಇವುಗಳಿಂದೊಡಗೂಡಿದ ಮೈಸೂರು ಜಿಲ್ಲೆ ಕರ್ನಾಟಕಕ್ಕೆ ಅಪೂರ್ವ ಕೊಡುಗೆ ಎನಿಸಿದೆ. ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಹೈದರಾಲಿ, ಟಿಪ್ಪು ಸುಲ್ತಾನ್ ಮತ್ತು ಮೈಸೂರು ಒಡೆಯರ್ ಮೊದಲಾದವರು ಈ ಜಿಲ್ಲೆಯನ್ನು ಆಳಿದವರು. ನಮ್ಮ ರಾಜ್ಯಕ್ಕೆ 'ಕರ್ನಾಟಕ' ಎಂದು ಹೆಸರಿಸುವ ಮೊದಲು 'ಮೈಸೂರು ರಾಜ್ಯ'ವೆಂದೇ ಹೆಸರಿತ್ತು. '೧೯೭೩ ನವೆಂಬರ್ ೧ರಂದು ಕರ್ನಾಟಕ ರಾಜ್ಯವೆಂದು ನಾಮಕರಣ. ಬೆಂಗಳೂರು ರಾಜ್ಯದ ರಾಜಧಾನಿಯಾಯಿತು. ಪ್ರಥಮ ವಿಶ್ವ ಕನ್ನಡಸಾಹಿತ್ಯ ಸಮ್ಮೇಳನ ಮೈಸೂರಿನಲ್ಲಿ ನಡೆದು ಅದೊಂದು ಐತಿಹಾಸಿಕ ದಾಖಲೆಯಾಯಿತು.

ಮೈಸೂರು ಪ್ರವಾಸಿಗಳ ತಾಣ ಇಲ್ಲಿ ಇತಿಹಾಸ ಪ್ರಸಿದ್ಧವಾದ ಅಂಬಾವಿಲಾಸ ಅರಮನೆ, ಜಗನ್ಮೋಹನ ಅರಮನೆ, ಇತಿಹಾಸ ಪ್ರಸಿದ್ಧ ಚಾಮುಂಡಿಬೆಟ್ಟ, ಅತಿ ಎತ್ತರದ ಚರ್ಚ್ ಎಂಬ ಹೆಗ್ಗಳಿಕೆಗೆ ಪಾತ್ರವಾದ ಸೆಂಟ್ ಫಿಲೋಮಿನ್ ಚರ್ಚ್ ಹಾಗೂ ಪ್ರತಿವರ್ಷವೂ ನಡೆಯುವ ದಸರಾ ಮೆರವಣಿಗೆಯನ್ನು ನೋಡಲು ವಿಶ್ವದ ನಾನಾ ಕಡೆಯಿಂದ ಬರುವ ಪ್ರವಾಸಿಗರು ಲಕ್ಷೋಪಲಕ್ಷ. ಮೈಸೂರು ೧೧ ತಾಲ್ಲೂಕುಗಳಿಂದ ಕೂಡಿ ಹೊರ ಮೈಲಕ್ಷಣಗಳಿಗೆ ಅನುಗುಣವಾಗಿವೆ. ಈ ಎಲ್ಲಾ ತಾಲ್ಲೂಕುಗಳು ಒಂದೊಂದು ವಿಧದಲ್ಲಿ ತಮ್ಮತನವನ್ನು ಹೊರಹೊಮ್ಮಿಸುತ್ತಿವೆ. ಇವುಗಳಲ್ಲಿ ಮೈಸೂರಿನ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಉತ್ತನಹಳ್ಳಿ ಗ್ರಾಮ ಜ್ವಾಲಾಮುಖಿ ದೇವಸ್ಥಾನವಿರುವುದರಿಂದ ಧಾರ್ಮಿಕ ಕ್ಷೇತ್ರವಾಗಿ ಅತಿಮುಖ್ಯ ವೆನಿಸಿದೆ"[೧]

**ಭೌಗೋಳಿಕ ಹಿನ್ನಲೆ:**

ಶಕ್ತಿ ಸ್ವರೂಪಿಣಿಯಾದ ಶ್ರೀ ಜ್ವಾಲಾಮುಖಿತ್ರಿಪುರಸುಂದರಿ ಅಮ್ಮನವರ ದೇವಸ್ಥಾನವಿದ್ದು ಉತ್ತನಹಳ್ಳಿ ಗ್ರಾಮ ಮೈಸೂರಿನಿಂದ ಕೇವಲ ೮ ಕಿ.ಮೀ. ದೂರದಲ್ಲಿದ್ದು ಪೂರ್ವ ದಿಕ್ಕಿನಲ್ಲಿದೆ. ನಂಜನಗೂಡು ಮತ್ತು ಊಟಿ ರಸ್ತೆಯ ನಡುವಿನ ತಿರುವಿನಿಂದ ಕೇವಲ ೪ ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಒಟ್ಟು ಜನಸಂಖ್ಯೆ ೧೭೪೦ ಈ ಗ್ರಾಮಕ್ಕೆ ಹೊಂದಿಕೊಂಡಂತೆಯೇ ಏಳಿಗೆ ಹುಂಡಿ ಎಂಬ ಗ್ರಾಮವಿದ್ದು, ಈ ಗ್ರಾಮದಲ್ಲಿ ೯೮೪ ಜನರು ವಾಸಮಾಡುತ್ತಿದ್ದಾರೆ.

ಈ ಗ್ರಾಮದಲ್ಲಿ ಕುರುಬ, ಲಿಂಗಾಯಿತ, ವಿಶ್ವಕರ್ಮ ಕುಂಬಾರ, ಮಡಿವಾಳ, ನಾಯಕ ಮತ್ತು ಹರಿಜನ ಎಂಬ ವಿವಿಧ ರೀತಿಯ ಜಾತಿಯ ಜನಾಂಗವೆಲ್ಲ ಅನ್ಯೋನ್ಯದಿಂದ ಸಹಬಾಳ್ವೆ ನಡೆಸುತ್ತಿದ್ದಾರೆ. ಈ ಗ್ರಾಮದಲ್ಲಿ ಕುರುಬ ಜಾತಿಗೆ ಸೇರಿದ ಜನಸಂಖ್ಯೆಯೇ ಹೆಚ್ಚಿನ ಪ್ರಮಾಣದಲ್ಲಿದೆ. ಇಲ್ಲಿನ ಜನರು ಮುಖ್ಯ ಜೀವನೋಪಯೋಗಕ್ಕಾಗಿ ರಾಗಿ, ಜೋಳ, ಹಲಸಂದೆ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಆದರೆ ಇತ್ತೀಚಿನ ವರ್ಷಗಳಲ್ಲಿ ವರುಣಾನಾಲೆಯ ಮೂಲಕ ಹರಿದುಬಂದ ಕಾವೇರಿ ಈ ಗ್ರಾಮಕ್ಕಲ್ಲದೆ ಇನ್ನು ಹಲವು ಗ್ರಾಮಗಳಿಗೆ ಜೀವನದಿಯಾಗಿ ಹರಿದು ಬರುತ್ತಿರುವುದರಿಂದ ಇಲ್ಲಿನ ಶೇಕಡ ೫೦ರಷ್ಟು ಜನರು ಭತ್ತವನ್ನು ಬೆಳೆಯುತ್ತಿದ್ದಾರೆ.

ಈ ಗ್ರಾಮದ ಅಕ್ಕಪಕ್ಕದಲ್ಲಿ ಹೊಸ ಹುಂಡಿ, ಹಡಜನ, ಲಲಿತಾದ್ರಿಪುರ, ಚಾಮುಂಡಿಬೆಟ್ಟ ಮುಂತಾದ ಗ್ರಾಮಗಳಿವೆ. ಈ ಗ್ರಾಮದಲ್ಲಿ ಹಲವು ವರ್ಷಗಳಿಂದ ಇಟ್ಟಿಗೆಯನ್ನು ಅಚ್ಚು ಹಾಕಿಸುತ್ತಾರೆ. ಇಲ್ಲಿನ ಇಟ್ಟಿಗೆ ಸುತ್ತಮುತ್ತಲ ಪ್ರದೇಶಗಳಲ್ಲಿ ಪ್ರಸಿದ್ಧಿಯಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಸಿಮೆಂಟಿನ ಇಟ್ಟಿಗೆಗಳೇ ಹೆಚ್ಚು ಪ್ರಚಲಿತವಿರುವುದರಿಂದ ಈ ಕೆಲಸವನ್ನು ಕೈ ಬಿಟ್ಟಿದ್ದಾರೆ. ಆದರೂ ಈ ಕಾಯಕವನ್ನು ಉಪಕಸುಬನ್ನಾಗಿ ಸ್ವೀಕರಿಸಿರುವ ಅಲ್ಪಪ್ರಮಾಣದ ಜನರು ಇನ್ನೂ ಇದೇ ಕಾರ್ಯದಲ್ಲಿ ಮುಂದುವರೆಯುತ್ತಿದ್ದಾರೆ.

ಒಂದು ಊರು ರೂಪುಗೊಳ್ಳಬೇಕಾದರೆ ಅದು ಅನೇಕ ಓಣಿ ಬೀದಿಗಳನ್ನು ಒಳಗೊಂಡಿರುತ್ತದೆ. ಸಾಮಾನ್ಯವಾಗಿ ಪ್ರತಿ ಊರುಗಳಲ್ಲಿಯು ಇರುವಂತೆಯೇ ಉತ್ತನಹಳ್ಳಿಯಲ್ಲೂ ಸಹ ಕುರುಬರ ಬೀದಿ, ಆಚಾರರ ಬೀದಿ, ಲಿಂಗಾಯಿತರ ಬೀದಿ, ಹರಿಜನರ ಬೀದಿ ಮುಂತಾದವುಗಳಿದ್ದು ಆಯಾ ಜಾತಿಗೆ ಸೇರಿದವರು ವಾಸಿಸುವ

ಉಪಕೇರಿಗಳು ಇವೆ. ಆದರೆ ಇತ್ತೀಚಿನ ದಿನಗಳಲ್ಲಿ ಹೊಸ ಹೊಸ ಮನೆಗಳು ನಿರ್ಮಾಣವಾಗುತ್ತಿದ್ದು, ಇವುಗಳಲ್ಲಿ ಎಲ್ಲಾ ವರ್ಗದವರು ವಾಸಿಸುವುದನ್ನು ಕಾಣಬಹುದಾಗಿದೆ.

ಈ ಗ್ರಾಮದಲ್ಲಿ ಬಹುತೇಕ ಮನೆಗಳು ಮಣ್ಣಿನ ಗೋಡೆಯನ್ನು ಹೊಂದಿವೆ. ತಮ್ಮ ಸಾಮರ್ಥ್ಯ ಮತ್ತು ಅಗತ್ಯತೆಗಳಿಗೆ ತಕ್ಕಂತೆ ವಿಶಾಲವಾದ ಮತ್ತು ಪುಟ್ಟದಾದ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಕೆಲವು ಮನೆಗಳಲ್ಲಿ ಪಡಸಾಲೆ, ಅಡುಗೆಮನೆ, ದೇವರ ಮನೆ ಬಚ್ಚಲು ಮನೆ ಮುಂತಾದವುಗಳನ್ನು ಕಾಣಬಹುದು. ಪ್ರಾಚೀನ ಕಾಲದಿಂದಲೂ ಬಹುತೇಕ ಹಳ್ಳಿಗಳಲ್ಲಿ ನಾಡ ಹೆಂಚಿನ (ಕುಂಬಾರರು ತಯಾರಿಸಿದ) ಮನೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ನೋಡಬಹುದು. ಆಧುನಿಕತೆಯ ಪ್ರಭಾವದಿಂದ ಬದಲಾಗುತ್ತಿರುವ ಕೆಲವು ಜನರು ಇತ್ತೀಚಿನ ವರ್ಷಗಳಲ್ಲಿ ಕಾಂಕ್ರಿಟ್ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ.

ಈ ಗ್ರಾಮದ ಕೊನೆಯ ಭಾಗದಲ್ಲಿ ಸುಮಾರು ೨೫ ಎಕರೆ ವ್ಯಾಪ್ತಿಯ ಕೆರೆಯನ್ನು ನೋಡಬಹುದು. ಇದು ಮಳೆಯನ್ನು ಆಧರಿಸಿದೆ. ಮಳೆಗಾಲದಲ್ಲಿ ತುಂಬಿ ಬೇಸಿಗೆಯ ಕಾಲದಲ್ಲಿ ಅಲ್ಪ ಮಳೆಯನ್ನು ಆಧರಿಸಿದೆ. ಮಳೆಗಾಲದಲ್ಲಿ ತುಂಬಿ ಬೇಸಿಗೆಯ ಕಾಲದಲ್ಲಿ ಅಲ್ಪ ಪ್ರಮಾಣದಲ್ಲಿ ಅಂದರೆ ಜಾನುವಾರುಗಳು ಕುಡಿಯುವ ನೀರಿನ ಬವಣೆಯನ್ನು ನೀಗಿಸುತ್ತದೆ. ಇತ್ತೀಚೆಗೆ ಡಿ.ದೇವರಾಜ ಅರಸುರವರ ದೂರದೃಷ್ಟಿಯ ಫಲವಾದ ವರುಣಾ ನಾಲೆಯಿಂದ ನೀರನ್ನು ಸಂಗ್ರಹಿಸಲಾಗುತ್ತಿದೆ.

**ಐತಿಹಾಸಿಕ ಹಿನ್ನಲೆ**

ಒಂದು ಊರಿನ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಂಡಾಗ ಊರಿನ ಎಲ್ಲಾ ವಿಷಯಗಳಿಗೆ ಸಂಬಂಧಪಟ್ಟಂತೆ ಸಂಶೋಧನೆಯನ್ನು ಕೈಗೊಳ್ಳಬೇಕಾದದ್ದು ಅನಿವಾರ್ಯ ಜೊತೆಗೆ ಅವಶ್ಯಕವೂ ಹೌದು. ಇಂತಹ ಸಂಶೋಧನೆಯಲ್ಲಿ ಪ್ರಮುಖವಾಗಿ ಜಾನಪದ ಅಂಶವೂ ಒಂದಾಗಿದೆ. ಜಾನಪದವು ತನ್ನದೇ ಆದ ಲಕ್ಷಣಗಳನ್ನು ಹೊಂದಿದೆ –

(೧) ಇದು ಕಂಠಸ್ಥ ಸಂಪ್ರದಾಯದಿಂದ ಬಂದಂತಹದ್ದು

(೨) ಸಾಮೂಹಿಕ ಪುನರ್‌ಸೃಷ್ಟಿಯಾಗುವಂತದ್ದು.

(೩) ಇದು ವ್ಯಾಪಕತೆಯಿಂದ ಕೂಡಿದೆ.

(೪) ಜನಪದ ಅಂಶವನ್ನು ಅವಿನಾಶಿ ಎನ್ನಬಹುದು.

(೫) ಇದು ಸರಳವಾಗಿದ್ದು - ಸ್ಪಷ್ಟತೆಯಿಂದ ಕೂಡಿದೆ.

(೬) ಪರಿವರ್ತನಾಶೀಲತೆಯಿಂದ ಕೂಡಿರುತ್ತದೆ.

(೭) ಇದಕ್ಕೆ ವಿಶ್ವಮೌಲಿಕತ್ವವಿದೆ.

ಜಾನಪದವನ್ನು ಅಭ್ಯಾಸದ ದೃಷ್ಟಿಯಿಂದ ಸಾಮಾನ್ಯವಾಗಿ ಮೂರು ವಿಭಾಗಗಳಾಗಿ ಮಾಡಿಕೊಳ್ಳಬಹುದು. ೧) ಕ್ಷೇತ್ರಕಾರ್ಯ

೨) ವಿಭಜನೆ

೩) ವಿಶ್ಲೇಷಣೆ

(೮) ಸ್ಮಿತ್ ಥಾಂಸನ್ - ೧೯೪೬ರಲ್ಲಿ ಜಾನಪದದ ಅಧ್ಯಯನ ಬಗೆಗೆ ಎರಡು ವರ್ಗೀಕರಣ ಮಾಡಿದ್ದಾರೆ.

೧) ಶಾಬ್ದಿಕ ಜಾನಪದ – ಕಥೆಗಳು, ಸಂಪ್ರದಾಯಗಳು

- ಹಾಡುಗಳು – ಕಥನಾತ್ಮಕ ಲಾವಣಿಗಳು
- ಭಾವಗೀತೆಗಳು
- ಕೆಲಸದ ಆಟದ ಮಕ್ಕಳ – ಹಾಡುಗಳು
- ಒಗಟು–ಗಾದೆ–ಹೇಳಿಕೆ–ಮಾಂತ್ರಿಕ ನುಡಿಗಳು

೨) ಆಚರಣೆಗಳು – * ನಿರ್ದಿಷ್ಟಕಾಲದ ಆಚರಣೆಗಳು

* ವ್ಯವಸಾಯ ಸಂಬಂಧಿ ಆಚರಣೆಗಳು
* ಮೂಢನಂಬಿಕೆಗಳು

ಪ್ರತಿಯೊಂದು ಹಳ್ಳಿಯಲ್ಲೂ ಜಾನಪದ ಅಧ್ಯಯನಕ್ಕೆ ಸಂಬಂಧಿಸಿದಂತೆ ಮೇಲಿನ ಅಂಶಗಳನ್ನೆಲ್ಲಾ ಗಮನಿಸಬೇಕು. ಉತ್ತನಹಳ್ಳಿಯ ಸಾಂಸ್ಕೃತಿಕ ಅಧ್ಯಯನದಲ್ಲಿ ಈ ಎಲ್ಲಾ ಅಂಶಗಳೂ ಅಲ್ಲಿನ ಜನಪದಕ್ಕೆ ಸಂಬಂಧಿಸಿದಂತೆ ಬಂದಿರುತ್ತವೆ. ಇವು ಪ್ರತಿ ಹಳ್ಳಿಗಳಲ್ಲಿಯೂ ಇರುವಂತಹವು.

ಮೊದಲಿಗೆ ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆಸಲು ಪ್ರಾರಂಭಿಸಿದ ನಂತರ ಮನುಷ್ಯ ತನ್ನ ಅಸ್ತಿತ್ವವನ್ನು ಕಂಡುಕೊಂಡ. ನಂತರದಲ್ಲಿ ಮನೆ, ಮಠ, ಗುಡಿ ಗೋಪುರಗಳು ಅಸ್ತಿತ್ವಕ್ಕೆ ಬಂದವು. ಕ್ರಮೇಣವಾಗಿ ಹಲವಾರು ವರ್ಷಗಳ ನಂತರ

ಸ್ಥಳನಾಮಗಳು ಕಾಣಿಸಿಕೊಂಡವು. ಮಾನವನ ವಿಕಾಸವಾದಂತೆಲ್ಲ ಪ್ರಾಕೃತಿಕ, ಭೌಗೋಳಿಕ, ಐತಿಹಾಸಿಕ, ಜಾನಪದೀಯ, ಐತಿಹ್ಯ, ಪುರಾಣ ಮತ್ತು ಸಾಂಸ್ಕೃತಿಕ ನೆಲಗಟ್ಟಿನ ಮೇಲೆ ಊರುಗಳ ಹೆಸರುಗಳು ಹುಟ್ಟಿಕೊಂಡವು.

ಉದಾಹರಣೆಗೆ ಚಾಮರಾಜನಗರ, ಮೈಸೂರು, ನಂಜನಗೂಡು, ನರಸೀಪುರ, ಕೆಂಪಿಸಿದ್ದನಹುಂಡಿ, ದೇವಲಾಪುರ, ಉತ್ತನಹಳ್ಳಿ, ಸೋಮೇಶ್ವರಪುರ ಇತ್ಯಾದಿ.

ಯಾವುದೇ ಒಂದು ದೇಶ, ರಾಜ್ಯ ಅಥವಾ ಹಳ್ಳಿಗಳನ್ನು ಕುರಿತು ಅಧ್ಯಯನ ಮಾಡುವಾಗ ಅವುಗಳ ಐತಿಹಾಸಿಕ ಹಿನ್ನೆಲೆಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಸಾಮಾನ್ಯವಾಗಿ ಒಂದು ಪ್ರದೇಶದ ರಚನೆಗೆ ಶಾಸನ, ತಾಮ್ರಪಟ, ಕಡತ, ತಾಳೆಗರಿ, ನಾಣ್ಯ ಸಾಹಿತ್ಯ ಕೃತಿಗಳು ಪ್ರಮುಖವಾಗಿ ಸಂಶೋಧನೆಯ ಮೂಲ ಆಧಾರವಾಗಿ ಪರಿಣಮಿಸುತ್ತವೆ. ಉತ್ತನಹಳ್ಳಿಯ ಕೆಲವು ದೇವಸ್ಥಾನಗಳು ಐತಿಹಾಸಿಕ ಹಿನ್ನೆಲೆ ಹೊಂದಿದ್ದು, ತನ್ನದೇ ಆದ ಇತಿಹಾಸವನ್ನು ಹೊಂದಿದೆ. "ಉತ್ತನಹಳ್ಳಿ ಎಂದು ಹೆಸರು ಬರಲು ಈ ಊರಿನಲ್ಲಿ ನೆಲೆಸಿರುವ ಉದ್ದವಾದ ನಾಲಿಗೆಯನ್ನುಳ್ಳ ಉರಿಕಾತಿಯೇ (ಜ್ವಾಲಾಮುಖಿ ತ್ರಿಪುರಸುಂದರಿ) ಪ್ರಮುಖ ಕಾರಣ ಎಂದು ತಿಳಿಯಬಹುದು."[೨] ಈ ಗ್ರಾಮದಲ್ಲಿ ಕಾರ್ಗಳ್ಳಿ ಕೋಟೆಯಿತ್ತೆಂದು ಅಲ್ಲಿನ ರಾಜ ಮಾರನಾಯಕನ ಆಳ್ವಿಕೆಗೊಳಪಟ್ಟ ಗ್ರಾಮಗಳಲ್ಲಿ ಉತ್ತನಹಳ್ಳಿಯು ಒಂದು ಎಂದು ತಿಳಿದುಬರುತ್ತದೆ. ಇದು ರಾಜರ ಆಳ್ವಿಕೆಗೊಳಪಟ್ಟ ಗ್ರಾಮ ಎಂಬುದಕ್ಕೆ ಕೆಲವೊಂದು ಕಲ್ಲು ಮತ್ತು ಇತರೆ ಅವಶೇಷಗಳು ಸಾಕ್ಷೀಭೂತವಾಗಿ ಈಗಲೂ ಕಾಣುತ್ತವೆ. ಹಿರಿಯರು ಈ ಬಗ್ಗೆ ನಿದರ್ಶನ ನೀಡುತ್ತಾರೆ.

'ಮಹಿಷ ಮಂಡಲ' ಎಂಬ ರಾಜ್ಯದಲ್ಲಿ (ಪ್ರಕೃತ ಮೈಸೂರು) 'ಮಹಿಷಾಸುರ'-ನೆಂಬ ರಾಕ್ಷಸ ನೆಲೆಸಿದ್ದನು. ಈ ಮಹಿಷಾಸುರ ಒಬ್ಬ ದುಷ್ಟ ರಾಕ್ಷಸನಾಗಿದ್ದು, ಈತನು ಮಾನವರಿಗೆ, ದಾನವರಿಗೆ ಋಷಿ ಮುನಿಗಳಿಗೆ ಕಂಟಕ ಪ್ರಾಯನಾಗಿದ್ದನು. ಋಷಿಗಳು ಯಜ್ಞಾ ಕಾರ್ಯಗಳಲ್ಲಿ ನಿರತರಾಗಿದ್ದಾಗ ವಿಘ್ನಪಡಿಸುತ್ತಿದ್ದನು. ಈ ರಾಕ್ಷಸನನ್ನು ಕಂಡು ಭಯಭೀತರಾದ ದೇವಾನುದೇವತೆಗಳು ಚಿಂತಾಜನಕದ ಸ್ಥಿತಿಯಲ್ಲಿದ್ದಾಗ, ಇನ್ನೂ ಸಾಮಾನ್ಯ ಮಾನವರ ಗತಿ ಹೇಳತೀರದು. ಮೂಲ ದ್ರಾವಿಡನಾಗಿದ್ದ ಈತನ ಅಟ್ಟಹಾಸಕ್ಕೆ ಪಾರಮ್ಯವೇ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಆತಂಕಗೊಂಡ ಋಷಿವರ್ಯರು ಇವನನ್ನು ಸಂಹಾರ ಮಾಡಲು ದೇವತೆಗಳ ಮೊರೆಹೊಕ್ಕರು. ದೇವತೆಗಳಲ್ಲಿಯೆ 'ತ್ರಿಮೂರ್ತಿ'ಗಳೆಂದು ಕರೆಯಲ್ಪಡುವ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ

ತಮ್ಮ ದುಗುಡವನ್ನು ತೋಡಿಕೊಂಡರು. ಆಗ ಈ ತ್ರಿಮೂರ್ತಿಗಳು ತಮ್ಮ ಸಾಮರ್ಥ್ಯದ ಕೊರತೆಯನ್ನು ಬಿಚ್ಚಿಡುತ್ತಾರೆ. ಆದರೆ ಈ ಮಹಿಷಾಸುರನನ್ನು ಸಂಹಾರ ಮಾಡಲೇಬೇಕೆಂದರೆ ಅದು ಒಂದು ಹೆಣ್ಣಿನಿಂದ ಸಾಧ್ಯವಾಗುತ್ತದೆ ಎಂದು ತಿಳಿದಾಗ ಬ್ರಹ್ಮ, ವಿಷ್ಣು, ಇವರ ಪತ್ನಿಯರಾದ ಸರಸ್ವತಿ, ಲಕ್ಷ್ಮೀ ಇವರು ನಮ್ಮಿಂದ ಈ ಕಾರ್ಯ ಅಸಾಧ್ಯವೆಂದು ಹೇಳಿದಾಗ ಶಿವನ ಅರ್ಧಾಂಗಿಯಾದ ಪಾರ್ವತಿಯು ಭೂಲೋಕದ ಕಲ್ಯಾಣಕ್ಕಾಗಿ ತಾನು ಕಂಕಣಬದ್ಧನಾಗಿದ್ದೇನೆ, ಮಹಿಷಾಸುರನನ್ನು ಸಂಹಾರ ಮಾಡುತ್ತೇನೆಂದು ಪಣ ತೊಡಲು, ದೇವಾನು ದೇವತೆಗಳೆಲ್ಲಾ ಪಾರ್ವತಿಯ ಧೈರ್ಯ, ಸಾಹಸವನ್ನು ಮೆಚ್ಚಿ ಭೂಲೋಕಕ್ಕೆ 'ಚಾಮುಂಡಿ' ಎಂಬ ಅಂಕಿತವನ್ನಿಟ್ಟು ತಮ್ಮ ಶಕ್ತಿಯನ್ನು ಧಾರೆ ಎರೆದು ಪ್ರಮುಖವಾದ ಆಯುಧಗಳನ್ನು ನೀಡುತ್ತಾರೆ. ಅವುಗಳೆಂದರೆ

೧) ರುದ್ರನು – ತ್ರಿಶೂಲ

೨) ಇಂದ್ರ – ವಜ್ರಾಯುಧ

೩) ವಿಷ್ಣು – ಚಕ್ರ

೪) ಬ್ರಹ್ಮ – ಕಮಂಡಲ ಮತ್ತು ಹಿಮಾಲಯದಲ್ಲಿ ವಿಹರಿಸಲು 'ಉಗ್ರಸಿಂಹ'ವನ್ನು ನೀಡುತ್ತಾರೆ.

ಹೀಗೆ ನೀಡಿದ ಸಾಮೂಹಿಕ ಶಕ್ತಿಯ ಪ್ರತೀಕವಾಗಿ ತಾಯಿ ಚಾಮುಂಡಿ ಅವತಾರವೆತ್ತಿದ್ದಳು. ಅಸಾಮಾನ್ಯ ಶಕ್ತಿಯನ್ನು ಪಡೆದು ಮಹಾಕಾಳಿಯಂತೆ ಚಾಮುಂಡಿ ದುಷ್ಟ ರಾಕ್ಷಸನನ್ನು ಸಂಹಾರ ಮಾಡಲು ಕೋಪಾಗ್ನಿಯನ್ನು ಮೊಗದಲ್ಲಿ ಬೀರುತ್ತಾ ನಿಂತಿರಲು ಅಷ್ಟು ಸುಲಭವಾಗಿ ಮಹಿಷಾಸುರನನ್ನು ಸಂಹಾರ ಮಾಡಲು ಸಾಧ್ಯವಿಲ್ಲದಂತಾಗುತ್ತದೆ. ಏಕೆಂದರೆ ಮಹಿಷಾಸುರನ ಒಂದು ಹನಿ ರಕ್ತ ಮಣ್ಣಲ್ಲಿ ಬಿದ್ದರೂ ಸಹ ಆ ಒಂದು ಹನಿಯ ರಕ್ತದಿಂದ ಸಾವಿರಾರು ರಾಕ್ಷಸರು ಉದ್ಭವಿಸುತ್ತಾರೆ ಎಂಬ ಚಿಂತೆ ತಾಯಿಯನ್ನು ಕಾಡಿತು. ಕೊನೆಗೂ ಸಂಹರಿಸಲು ನಿಶ್ಚಯಿಸಿ ಮಹಿಷ ಮಂಡಲಕ್ಕೆ ಬರುತ್ತಾಳೆ. ದುಷ್ಟ ರಾಕ್ಷಸನನ್ನು ಸಂಹರಿಸಲು ಮುಂದಾದಾಗ ಪ್ರತಿ ರಕ್ತದ ಕಣ ಕಣದಿಂದಲೂ ರಾಕ್ಷಸರು ಜನ್ಮ ಪಡೆಯುತ್ತಿದ್ದುದನ್ನು ಕಂಡು ಭಯಭೀತಿ, ಆತಂಕ ಮತ್ತು ಆಯಾಸದಿಂದ ತನ್ನ ಮುಖದಿಂದ ಬರುತ್ತಿದ್ದ ಬೆವರನ್ನು ತೆಗೆದು ಬಿಸಾಡಲು ಈ ಬೆವರಿನಿಂದಲೇ ಮಾತೆ ಉತ್ತನಹಳ್ಳಿ ಹುರುಕಾತಿ ಅಥವಾ ಉತ್ನಹಳ್ಳಿ ಮಾರಮ್ಮ ಅವತರಿಸುತ್ತಾಳೆ. ಆಶ್ಚರ್ಯ ಚಕಿತಗೊಂಡ ತಾಯಿ ಚಾಮುಂಡಿಯು 'ನೀನು

ಯಾರು?' ಎಂದು ಕೇಳಿದಾಗ ಅದಕ್ಕೆ ಮಾತೆ 'ನಾನು ನಿನ್ನ ಸಹೋದರಿ ಜ್ವಾಲಾಮುಖಿ ತ್ರಿಪುರ ಸುಂದರಿ ಅಕ್ಕ. ನಿನಗೆ ಒದಗಿ ಬಂದ ಈ ನಿನ್ನ ದುಗುಡವನ್ನು ಪರಿಹರಿಸಲು ಉದ್ಭವಿಸಿದ್ದೇನೆ. ಮಹಿಷಾಸುರನನ್ನು ನೀನು ಈಗ ಕೊಲ್ಲು ನಾನು ಈ ರಾಕ್ಷಸನ ರಕ್ತ ನೆಲಕ್ಕೆ ಬೀಳದಂತೆ ನನ್ನ ಕೆನ್ನಾಲಿಗೆಯನ್ನು ಚಾಚುತ್ತೇನೆಂದು ಹೇಳುತ್ತಾಳೆ'. ಸಹೋದರಿಯ ಅಣತಿಯಂತೆ ಜಗನ್ಮಾತೆ ಮಹಿಷಾಸುರನನ್ನು ಹುರುಕಾತಿಯ ನಾಲಿಗೆ ಮೇಲೆ ಕೊಲ್ಲುತ್ತಾಳೆ. ಜ್ವಾಲಾಮುಖಿ ದೇವಿಯು ಅವನ ರಕ್ತವನ್ನು ಕುಡಿದು ತೇಗುತ್ತಾಳೆ. ಹೀಗೆ ತನಗೆ ಸಹಾಯ ಮಾಡಿದ ಸಹೋದರಿಯನ್ನು ಚಾಮುಂಡಿಯು ಕೊಂಡಾಡುತ್ತಾಳೆ.

**ಜವರಪ್ಪನವರ ಹೇಳಿಕೆಯಂತೆ**

ಉತ್ತನಹಳ್ಳಿ ಗ್ರಾಮದ ಜವರಪ್ಪನವರು ಹೇಳಿದ ಪ್ರಕಾರ 'ಮಹಿಷಾಸುರನನ್ನು ಸಂಹಾರಮಾಡಲು ಚಾಮುಂಡಿಗೆ ನೆರವಾದ ಉತ್ನಳ್ಳಮ್ಮನು ಸಂಹಾರವಾದ ತದನಂತರ ಚಾಮುಂಡೇಶ್ವರಿಯು ಬೆಟ್ಟದಲ್ಲಿ ನೆಲೆಸಿ 'ಬೆಟ್ಟದ ತಾಯಿ' ಎಂದು ಪ್ರಸಿದ್ಧಿಯಾದರೆ, ಸಹೋದರಿಯಾದ ಉತ್ನಳ್ಳಮ್ಮ ತನ್ನ ಪಕ್ಕದಲ್ಲೇ ನೆಲೆಸು ಎಂದು ಎಷ್ಟೆ ಹೇಳಿದರು ಕೇಳದೆ ಬೆಟ್ಟದಲ್ಲಿಂದ ೫ ಬಳಪದ ಕಲ್ಲುಗಳನ್ನು ಎತ್ತಿಕೊಂಡು ಬರುತ್ತಿರಬೇಕಾದರೆ ಚಾಮುಂಡೇಶ್ವರಿಯು ನೋಡುತ್ತಾಳೆ. ಎಷ್ಟೇ ತಡೆದರೂ ನಿಲ್ಲದೆ ಮಾರಮ್ಮನು ಓಡಿಬರಬೇಕಾದರೆ ಕಾಲಿಗೆ ಕಲ್ಲು ತಾಗಿ ಬೀಳುತ್ತಾಳೆ. ಇದನ್ನು ಇಂದು 'ಬಿದ್ದ್‌ಬೆಟ್ಟ' ಎಂದು ಕರೆಯುತ್ತಾರೆ. ಹೇಗೋ ಎದ್ದು ನಡೆದು ಬಂದು ಬೆಟ್ಟ ತಪ್ಪಲಿನಲ್ಲಿರುವ ಗ್ರಾಮದಲ್ಲಿ ಬಂದು ನೆಲೆಸುತ್ತಾಳೆ. ಅಂದಿನಿಂದ ಈ ಉತ್ನಳ್ಳಮ್ಮನ ಹೆಸರಿನೊಂದಿಗೆ ಈ ಗ್ರಾಮ "ಉತ್ತನಹಳ್ಳಿ" ಎಂದು ರೂಢನಾಮವಾಗಿ ಕರೆಸಿಕೊಳ್ಳುತ್ತಿದೆ' ಎಂದು ಅವರು ತಿಳಿಸಿದರು.

ಕಿಟಲ್ ಪದ ಕೋಶದಲ್ಲಿ 'ಉತ್ತ' ಎಂಬ ಶಬ್ದಕ್ಕೆ 'ಹುತ್ತ' ಎಂಬ ಅರ್ಥವಿದೆ. ಆದರೆ ಇಲ್ಲಿ ಹುತ್ತಗಳು ಜಾಸ್ತಿ ಇಲ್ಲ. ಇಲ್ಲಿಯ ದೇವಿ ಚಾಮುಂಡೇಶ್ವರಿಗೂ ಮತ್ತು ರಕ್ತಾಬೀಜಾಸುರ ಎಂಬ ರಾಕ್ಷಸನಿಗೆ ಯುದ್ಧ ನಡೆಯುವ ಸಂದರ್ಭದಲ್ಲಿ ನಾಲಗೆಯನ್ನು ಹಾಸಿ ಯುದ್ಧದಲ್ಲಿ ನೆರವಾದಳಂತೆ. ಉದ್ದವಾದ ನಾಲಿಗೆಯನ್ನು ಜ್ವಾಲಾಮುಖಿ ಹೊಂದಿರುವುದರಿಂದಲೇ ಇಲ್ಲಿ ಉತ್ತನಹಳ್ಳಿ ಎಂದು ನಾಮಕರಣವಾಯಿತೆಂದು ತಿಳಿದು ಬರುತ್ತದೆ.

ಮೈಸೂರಿಗೆ ಹತ್ತಿರವಾಗಿರುವ ಈ ಗ್ರಾಮ ಇನ್ನೂ ಕೆಲವಾರು ವರ್ಷಗಳಲ್ಲಿ ನಗರಪಾಲಿಕೆಯ ಆಳ್ವಿಕೆಗೆ ಒಳಪಡುವ ಸಾಧ್ಯತೆಯಿದೆ. ಅಲ್ಲದೆ ಈ ಊರಿಗೆ ಕೇವಲ ೨ ಕಿ.ಮೀ. ದೂರದಲ್ಲಿ ಆರ್.ಎಂ.ಸಿ. (ರೆಗ್ಯೂಲೇಟಿಂಗ್ ಮಾರ್ಕೆಟ್ ಕಾರ್ಪೋರೇಷನ್) ಇರುವುದರಿಂದ ಇದರ ಸುತ್ತಮುತ್ತಲ ಹಳ್ಳಿಗಳಲ್ಲಿ ಕೆಲವು ವ್ಯಾಪಾರಗಳಿಗೆ ಸಂಬಂಧಿಸಿದಂತೆ ಕಛೇರಿಗಳು ತಲೆ ಎತ್ತುತ್ತಿವೆ. ಮತ್ತು ತರಕಾರಿ ಮಾರುಕಟ್ಟೆ ದಿನಾಂಕ ೦೧-೦೬-೨೦೧೨ ರಂದು ಮೂಲ ಸ್ಥಳದಿಂದ ವರ್ಗಾವಣೆಯಾಗಿದೆ. ಅಲ್ಲದೆ ಈ ಊರಿನ ಸನಿಹದಲ್ಲಿಯೇ ರಿಂಗ್ ರೋಡ್ ಆಗುತ್ತಿರುವುದು ಮುಂದಿನ ದಿನಗಳಲ್ಲಿ ಈ ಗ್ರಾಮವಲ್ಲದೆ ಹತ್ತಾರು ಗ್ರಾಮಗಳು ತಮ್ಮ ಮೂಲರೂಪವನ್ನು ಕಳೆದುಕೊಂಡು ಆಧುನಿಕತೆಯತ್ತ ಸಾಗುವಲ್ಲಿ ಯಶಸ್ವಿಯಾಗುತ್ತವೆ ಎಂಬ ಮಾತು ಸಹ ಕೇಳಿ ಬರುತ್ತಲಿದೆ.

**ಅಡಿಟಿಪ್ಪಣಿಗಳು**

೧. ಆರ್. ರಾಮಕೃಷ್ಣ, ತಾಲ್ಲೂಕು ದರ್ಶನ, ಪುಟ. ೩.

೨. ಎಸ್.ಸಿ. ಮಹದೇವಪ್ರಸಾದ್, ಅರ್ಚಕರು, ವಯಸ್ಸು-೬೦.

## ಅಧ್ಯಾಯ – ೩

# ಉತ್ತನಹಳ್ಳಿ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಸ್ಥಿತಿಗತಿ

ಯಾವುದೇ ರಾಷ್ಟ್ರ, ರಾಜ್ಯ ಮತ್ತು ಜಿಲ್ಲೆಗಳು ಅಲ್ಲಿನ ಕೆಲವೊಂದು ಪರಿಸ್ಥಿತಿಗಳ ಮೇಲೆ ರೂಪುಗೊಂಡಿರುತ್ತದೆ. ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಸಮೃದ್ಧವಾಗಿರುವ ರಾಷ್ಟ್ರ, ರಾಜ್ಯಗಳಲ್ಲಿ ಯಾವುದೇ ರೀತಿಯ ತೊಂದರೆಯಿರದೆ ಅಲ್ಲಿನ ಪರಿಸರ ಉತ್ತಮವಾಗಿದ್ದು, ಅಲ್ಲಿನ ಜನಸಾಮಾನ್ಯರು ಸಂತೋಷದಿಂದ ಕಾಲ ಕಳೆಯುತ್ತಾರೆ. ಈ ನಿಟ್ಟಿನಲ್ಲಿ ಉತ್ತನಹಳ್ಳಿ ಗ್ರಾಮದಲ್ಲಿ ಕಂಡುಬರುವ ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಯನ್ನು ಅರಿಯುವ ಮೂಲಕ ಇವು ಹೇಗೆ ಈ ಗ್ರಾಮದ ಮೇಲೆ ತಮ್ಮ ಪ್ರಭಾವವನ್ನು ಬೀರಿವೆ ಎಂಬುದನ್ನು ಇಲ್ಲಿ ವಿವರಿಸಿದ್ದೇನೆ.

**ಅ) ಸಾಮಾಜಿಕ ಸ್ಥಿತಿಗತಿ:** ಜನಸಾಮಾನ್ಯರು ಸಾಮಾಜಿಕವಾಗಿ ಸರಳ ಜೀವನ ನಡೆಸುವವರಾಗಿದ್ದು, ಈ ಗ್ರಾಮದ ಎಲ್ಲಾ ಜನಾಂಗದವರು ಸಹಬಾಳ್ವೆಯಿಂದ ಜೀವನ ಸಾಗಿಸುತ್ತಾರೆ. ಇಲ್ಲಿನ ಜನರ ಮುಖ್ಯ ಕಸುಬು ವ್ಯವಸಾಯ. ವ್ಯವಸಾಯವನ್ನು ಕುರುಬ, ಲಿಂಗಾಯಿತ, ಕುಂಬಾರ ಮತ್ತು ಹರಿಜನ ಜನಾಂಗದವರು ಹೆಚ್ಚಿನ ಪ್ರಮಾಣದಲ್ಲಿ ಅವಲಂಬಿಸಿದ್ದಾರೆ. ಈ ಗ್ರಾಮದಲ್ಲಿ ಅಧಿಕ ಪ್ರಮಾಣದಲ್ಲಿ ಕುರುಬ ಜನಾಂಗಕ್ಕೆ ಸೇರಿದ ಜನರಿದ್ದಾರೆ. ಕುಂಬಾರರು ಹಿಂದೆ ಮಡಿಕೆ ಕುಡಿಕೆ ಮತ್ತು ಹೆಂಚುಗಳನ್ನು ಗೋಡು ಮಣ್ಣಿನಿಂದ ತಯಾರಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ತಮಗೆ ವರದಾನವಾಗಿ ಬಂದಿರುವ ಈ ಕುಲಕಸುಬನ್ನು ಮರೆತು ಅನ್ಯ ಕೆಲಸಗಳನ್ನು ಮಾಡುತ್ತಿದ್ದಾರೆ. ಆಚಾರಿಗಳು ರೈತನಿಗೆ ಬೇಕಾಗುವ ಕೆಲವು ವ್ಯವಸಾಯೋತ್ಪಕರಣ–ಗಳನ್ನು ತಯಾರು ಮಾಡುವುದರ ಜೊತೆಗೆ ಇತರೆ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಗಸರು ಬಟ್ಟೆ ಶುಚಿಮಾಡಿ ಅದಕ್ಕೆ ಇಸ್ತ್ರಿ ಮಾಡುವ ಕಾಯಕದಲ್ಲಿ ತೊಡಗಿದ್ದಾರೆ. ಹರಿಜನರು ಹಿಂದೆ ಇತರ ಜನಾಂಗದವರ ಹೊಲ ಮನೆಗಳಲ್ಲಿ ಕೆಲಸ ಮಾಡುತ್ತಿದ್ದು, ಕೆಲವರು ವ್ಯವಸಾಯದಲ್ಲೂ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಈ ಗ್ರಾಮದಲ್ಲಿ ಕಾಣಬಹುದು. ಈ ಜನಾಂಗದವರಲ್ಲದೆ ಇತರೆ ಜನಾಂಗದವರು ತಮಗೆ ಬಂದಿರುವ ಕುಲಕಸುಬು, ಇತರೆ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಈ ಗ್ರಾಮಕ್ಕೆ ಹೊಂದಿಕೊಂಡಂತೆಯೇ ಇರುವ ಏಳಿಗೆ ಹುಂಡಿ

ಗ್ರಾಮದಲ್ಲಿ ಶೇಕಡ ೧೫ರಷ್ಟು ಜನ ತಮ್ಮ ಜಮೀನುಗಳನ್ನು ಮಾರಿಕೊಂಡು ಅನಾವಶ್ಯಕವಾಗಿ ಹಣವನ್ನು ನೀರಿನಂತೆ ವ್ಯಯಮಾಡಿ ಅವಸಾನದತ್ತ ತಮ್ಮ ಜೀವನವನ್ನು ಬಲಿಕೊಡುತ್ತಿದ್ದಾರೆ.

ಈ ಗ್ರಾಮದಲ್ಲಿ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರವಿದ್ದು, ಇತ್ತೀಚಿನ ದಿನಗಳಲ್ಲಿ ಒಬ್ಬ ದಾದಿ ಅಲ್ಲಿ ಉಳಿದುಕೊಳ್ಳುವ ವ್ಯವಸ್ಥೆಯನ್ನು ಸರ್ಕಾರ ಮಾಡಿದೆ. ಈ ಗ್ರಾಮಕ್ಕೆ ಅರ್ಧಗಂಟೆಗೊಮ್ಮೆ ಬಸ್ಸುಗಳ ಸೌಕರ್ಯವಿದ್ದು ಇಲ್ಲಿನ ದೇವಸ್ಥಾನಕ್ಕೆ ದಿನ ನೂರಾರು ಭಕ್ತರು ಬಂದು ಹೋಗುತ್ತಾರೆ. ಇನ್ನು ಕೆಲವೇ ವರ್ಷಗಳಲ್ಲಿ ಈ ಊರಿನ ಅಂಚಿನಲ್ಲಿಯೇ ವರ್ತುಲ ರಸ್ತೆ ಆಗುವ ಸಾಧ್ಯತೆಯಿದೆ.

ಸಾಮಾಜಿಕವಾಗಿ ಈ ಗ್ರಾಮದಲ್ಲಿ ಕೆಲವು ನಂಬಿಕೆ ಸಂಪ್ರದಾಯಗಳಿವೆ. ಮಾನವ ಜೀವನವನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಪೋಷಿಸುವಲ್ಲಿ ನಾಗರಿಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯಾಚರಣೆಗೆ ವಿಶೇಷ ಮಹತ್ವವಿದೆ. ಅವು ಅವನ ಬಾಳಿನ ಅವಿಭಾಜ್ಯ ಸಂಗಾತಿಗಳಾಗಿವೆ. ಸಮಾಜವನ್ನು ಒಂದುಗೂಡಿಸುವ ಮತ್ತು ಮುಂದಕ್ಕೊಯ್ಯುವ ಶಕ್ತಿ ಪುಂಜಗಳಾಗಿವೆ. ಅವನ ನಡಾವಳಿ ಹಾಗೂ ವ್ಯವಹಾರಗಳು ಸಂಪ್ರದಾಯಬದ್ಧವಾಗಿಯೇ ಜರುಗುತ್ತವೆ. ಜಗತ್ತಿನ ಸಕಲ ರಾಷ್ಟ್ರಗಳ ಕಾನೂನು ರಚನೆಗೆ ಸಂಪ್ರದಾಯಗಳೇ ಆಧಾರ. ಪ್ರದೇಶದಿಂದ ಪ್ರದೇಶಕ್ಕೆ, ಕುಲದಿಂದ ಕುಲಕ್ಕೆ ವ್ಯತ್ಯಾಸಗೊಳ್ಳುವ ಕೆಲವು ಸಂಪ್ರದಾಯಗಳು ಸಾರ್ವತ್ರಿಕ ವ್ಯಾಪ್ತಿಯೊಳಗೆ ಸೇರದೆ ಹೊರಚ್ಚಾಗಿಯೇ ನಿಲ್ಲುವ ಸಂಭವವುಂಟು. ಸಾಮಾನ್ಯವಾಗಿ ಸಂಪ್ರದಾಯಗಳು ಎರಡು ಕವಲುಗಳಾಗಿ ಒಡೆಯುತ್ತವೆ. (೧) ರಾಜಕೀಯ (೨) ಸಾಮಾಜಿಕ (೩) ಧಾರ್ಮಿಕ. ಮೊದಲನೆಯದು ಕಾನೂನು ಶಾಸ್ತ್ರವಾಗಿ ವಿಕಾಸಗೊಂಡರೆ, ಎರಡನೆಯದು ನೀತಿಶಾಸ್ತ್ರವಾಗಿ ಅರಳುತ್ತದೆ.

ಸಾಮಾನ್ಯವಾಗಿ ಬೇಸಿಗೆಕಾಲ ಮುಗಿದು ಮಳೆಗಾಲ ಆರಂಭವಾಗುವ ಸಂದರ್ಭದಲ್ಲಿ ಗ್ರಾಮದಲ್ಲಿ ಹಿಂದಿನಿಂದಲೂ ಊರಿನ ಕೆಲವು ನ್ಯಾಯ ತೀರ್ಮಾನ ಮಾಡುತ್ತಿದ್ದ ಪಟೇಲ ಮನೆತನದವರು ಹೊನ್ನೇರು ಕಟ್ಟುವುದು ಸಂಪ್ರದಾಯ. ಅದರಂತೆ ಉತ್ತನಹಳ್ಳಿಯಲ್ಲಿ ಇಂದಿಗೂ ಪಟೇಲ ಮನೆತನದವರು ಹೊನ್ನೇರನ್ನು ಕಟ್ಟುವ ಮೊದಲು ಎತ್ತುಗಳಿಗೆ ಬಣ್ಣಗಳಿಂದ ಶೃಂಗಾರಮಾಡಿ ಹೊಲದಲ್ಲಿ ಪೂಜೆ ಮಾಡಿ ಏರು ಕಟ್ಟುತ್ತಾರೆ. ಇವರು ಹೊನ್ನೇರು ಕಟ್ಟುವ ಮೊದಲು ಬೇರಾರು ಏರು ಕಟ್ಟುವ ಆಗಿಲ್ಲ. ಇದಕ್ಕೆ ಅನ್ನ ಶಾಂತಿಯಿಂದೊಡಗೂಡಿದ ನಿವೇದನೆಗಳೊಂದಿಗೆ

ಕೈಂಕರ್ಯಗಳು ಸಾಂಗೋಪಸಾಂಗವಾಗಿ ನಡೆಯುತ್ತವೆ. ಅಲ್ಲದೆ ಕೆಲವು ದೇವಸ್ಥಾನಗಳಿಗೆ ಹಿಂದಿನಿಂದಲೂ ಸಂಪ್ರದಾಯಬದ್ಧವಾಗಿ ಪೂಜೆ ಮಾಡುತ್ತಿರುವ ಮನೆತನದವರೇ ಈಗಲೂ ಆ ಪರಂಪರೆ ಮುಂದುವರೆಸಿಕೊಂಡು ಹೋಗುತ್ತಿರು-ವುದನ್ನು ಇಂದಿಗೂ ಈ ಗ್ರಾಮದಲ್ಲಿ ಕಾಣಬಹುದು.

**ನಂಬಿಕೆಗಳು:** ನಂಬಿಕೆಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತವೆ. ಒಂದು ಜನಪದ ಸಂಸ್ಕೃತಿ ವಿಶಿಷ್ಟ ಅನ್ನಿಸಿಕೊಳ್ಳುವುದು ಅಲ್ಲಿ ಜನಮನದಲ್ಲಿ ನಿಂತ ಮೂಲಭೂತ ನಂಬಿಕೆಗಳ ಆಧಾರದ ಮೇಲೆಯೇ. ನಮ್ಮ ನಂಬಿಕೆಗಳು ಬದುಕಿನ ಸೊಗಡನ್ನು ಸಾರಿ ಹೇಳುತ್ತದೆ. ಜಗತ್ತಿನಲ್ಲಿ ಎಲ್ಲಿಂದ ಎಲ್ಲಿಗೆ ಹೋಗಲಿ ನಂಬಿಕೆಗಳ ಪಾತಾಳಿಯೇ ಸಂಸ್ಕೃತಿಯ ಕೆನೆಯ ಪ್ರಾಥಮಿಕ ಘಟಕ. ಮಾನವನ ಹುಟ್ಟಿದ ಗುಟ್ಟಿನ ಸಕಲ ಸಮಸ್ತವನ್ನು ಅರಿಯಲಾರದೇ ಇರುವುದರಿಂದ ಸಾವಿನ ಮೇಲೆ ಪ್ರಭುತ್ವ ಪಡೆದಿಲ್ಲದಿರುವುದರಿಂದ ಒಂದಲ್ಲ ಒಂದು ಭಯ ನಮ್ಮ ಅಂತರಾಳದಲ್ಲಿ ಹುದುಗಿರುವುದರಿಂದ, ಎಲ್ಲಿಯವರೆಗೆ ನಾವು ಅಜೇಯರಾಗಿರುವುದಿಲ್ಲವೋ ಅಲ್ಲಿಯವರೆಗೂ ಸಮಾಜದಲ್ಲಿ ನಂಬಿಕೆಗಳು ಇದ್ದೇ ಇರುತ್ತವೆ. ಅಂತೆಯೇ ಉತ್ತನಹಳ್ಳಿ ಗ್ರಾಮದಲ್ಲೂ ಕೆಲವು ನಂಬಿಕೆಗಳಿವೆ. ಅವುಗಳಲ್ಲಿ ಸತ್ತ ಮನುಷ್ಯನು ಆಯುಷ್ಯವನ್ನು ಪೂರ್ಣಗೊಳಿಸಿಲ್ಲದಿದ್ದರೆ ದೆವ್ವ ಆಗುತ್ತಾನೆಂದು ನಂಬಿ ಎಡೆ ಹಾಕುತ್ತಾರೆ. ಇದನ್ನು ಆಗಸ್ಟ್ ತಿಂಗಳಿನಲ್ಲಿ 'ಮಕ್ಕೆಹಬ್ಬ'ವೆಂದು ಆಚರಿಸಿದರೆ ಮತ್ತೆ ಕೆಲವರು ಆಯುಧಪೂಜೆಯಂದು 'ಪಕ್ಷ'ವೆಂದು ಆಚರಿಸುತ್ತಾರೆ. ಇದನ್ನು ಮಾಡುವ ಮುನ್ನ ಮನೆಯನ್ನೆಲ್ಲ ಸ್ವಚ್ಚ ಮಾಡಿ ಮನೆಯಲ್ಲಿ ತಯಾರಿಸಿದ ಅಡುಗೆಯ ಜೊತೆಗೆ ಸತ್ತ ಮನುಷ್ಯ ಇಷ್ಟಪಡುತ್ತಿದ್ದ ತಿಂಡಿತಿನಿಸುಗಳನ್ನು ಸತ್ತವರ ಹೆಸರಿನಲ್ಲಿ ಕಲ್ಲು ನೆಟ್ಟ ಸ್ಥಳಕ್ಕೆ ಹೋಗಿ ಎಡೆ ಹಾಕುತ್ತಾರೆ. ಕೆಲವರು ಮನೆಯಲ್ಲೇ ಎಡೆಹಾಕುವುದುಂಟು. ದೆವ್ವದ ಬಗೆಗಿನ ನಂಬಿಕೆ ಗ್ರಾಮವಾಸಿಗಳಿಗೆ ಸೀಮಿತವೇನಲ್ಲ. ನಗರ ವಾಸಿಗಳು ಇದರ ಅಸ್ತಿತ್ವವನ್ನು ಸತ್ಯವೆಂದು ಒಪ್ಪುತ್ತಾರೆ. ಜನಪದ ಸಮಾಜದಲ್ಲಂತೂ ಇವುಗಳಿಗೆ ಮಹತ್ವದ ಸ್ಥಾನವಿದೆ.

ಇವುಗಳ ಜೊತೆಯಲ್ಲಿ ಇಲ್ಲಿ ಕಂಡುಬರುವ ನಂಬಿಕೆಗಳೆಂದರೆ :

೧. ರಾತ್ರಿಯ ವೇಳೆ ಮನೆಯ ಕಸವನ್ನು ಹೊರಹಾಕಬಾರದು

೨. ಮಂಗಳವಾರ ಮಂಡೆ ಕೂದಲು ತೆಗೆಯಬಾರದು

೩. ಮನೆಯ ಮೇಲೆ ಗೂಬೆ ಕೂರಬಾರದು

೪. ಹುಣಸೆ ಮತ್ತು ನುಗ್ಗೆ ಮರಗಳಲ್ಲಿ ದೆವ್ವ ಇರುತ್ತವೆ

೫. ರಾತ್ರಿ ಮಾಂಸದೂಟ ಮಾಡಿ ಹೊಲಗದ್ದೆಗಳಲ್ಲಿ ಮಲಗಬಾರದು

೬. ಅಮಾವಾಸ್ಯೆಯಲ್ಲಿ ದೆವ್ವಗಳು ಓಡಾಡುತ್ತವೆ

೭. ಹೆಗಲಿನ ಮೇಲೆ ಹಲ್ಲಿ ಬಿದ್ದರೆ ಅನಿಷ್ಟ

೮. ಅರಳಿಮರ ಮತ್ತು ಬನ್ನಿಮರಗಳನ್ನು ಸೌದೆಗೆ ಉಪಯೋಗಿಸಬಾರದು

೯. ಯಾವುದೇ ದಾನ್ಯದ ರಾಶಿಯನ್ನು ಕಾಲಿನಿಂದ ತುಳಿಯಬಾರದು

೧೦. ಕಸಬರಿಕೆಯನ್ನು ಕಾಲಿನಿಂದ ತುಳಿಯಬಾರದು

೧೧. ಬೆಕ್ಕು ಎಡದಿಂದ ಬಲಕ್ಕೆ ಹೋದರೆ ಅಪಶಕುನ

೧೨. ಕಾಗೆ ಒಂದೇ ಸಮನೆ ಕೂಗುತ್ತಿದ್ದರೆ ಅದನ್ನು ಸಾವಿನ ಸಂಕೇತ ಅಥವಾ ನೆಂಟರಿಷ್ಟರ ಆಗಮನವೆಂಬ ನಂಬಿಕೆ. ಇದಲ್ಲದೇ ಇನ್ನು ಹಲವಾರು ನಂಬಿಕೆಗಳನ್ನು ಈ ಹಳ್ಳಿಯಲ್ಲಿ ಸಾಮಾನ್ಯವಾಗಿ ಕಾಣಬಹುದು.

**ಆ) ರಾಜಕೀಯ ವ್ಯವಸ್ಥೆ:** ಪ್ರಾಚೀನ ಕಾಲದಿಂದ ಮಾನವ ಸಮೂಹ ಜೀವಿಯಾಗಿಯೇ ಬದುಕು ನಡೆಸುತ್ತಾ ಬಂದಿದ್ದಾನೆ. ಮನೆಮಾರುಗಳಿಲ್ಲದೆ ಗೊತ್ತು ಗುರಿಯಿಲ್ಲದೆ ನಿಂತಲ್ಲಿ ನಿಲ್ಲದೆ ಅಲೆಮಾರಿಯಾಗಿ ಕಾಡಿನಿಂದ ಕಾಡಿಗೆ, ಮಾಡಿನಿಂದ ಮೇಡಿಗೆ ಅಲೆದಾಡುತ್ತಿದ್ದಾಗ ಹಲವಾರು ಅಪಾಯಗಳಿಂದ ಸ್ವರಕ್ಷಣೆಗಾಗಿ ಅವನು ಗುಂಪಿನ ಆಸರೆ ಪಡೆಯಬೇಕಾಯಿತು. ಗುಂಪು ಅಸ್ತಿತ್ವಕ್ಕೆ ಬಂದಮೇಲೆ ಅವರಲ್ಲಿ ಕೆಲವು ಸಂಘರ್ಷ-ಗಳು ನಡೆದು ಜಗಳಕ್ಕೆ ಕಾರಣವಾದ ಹಿನ್ನಲೆಯಲ್ಲಿ ನ್ಯಾಯ ತೀರ್ಮಾನ ಮಾಡು-ವುದನ್ನು ಬೆಳೆಸಿಕೊಳ್ಳುತ್ತಾ ಬಂದರೆಂದು ಹೇಳಬಹುದು.

ಬಹಳ ಹಿಂದಿನಿಂದಲೂ ಪ್ರತಿಯೊಂದು ಹಳ್ಳಿಯಲ್ಲಿ ಯಾರದರೂ ತಪ್ಪು ಮಾಡಿದರೆ, ಹಿರಿಯರು, ಅನುಭವಿಗಳು ನ್ಯಾಯ ತೀರ್ಮಾನ ಮಾಡುವುದರ ಮೂಲಕ ತಪ್ಪಿತಸ್ಥನಿಗೆ ಶಿಕ್ಷೆ ವಿಧಿಸುತ್ತಾ ಬಂದಿರುವುದನ್ನು ಕಾಣಬಹುದು. ಅಂತೆಯೇ ಉತ್ತನಹಳ್ಳಿಯಲ್ಲಿಯು ನ್ಯಾಯಗಳು ನಡೆಯುವುದನ್ನು ಕಾಣಬಹುದು. ಇದರಲ್ಲಿ ಊರಿನ ಕೆಲವು ಪ್ರಮುಖರು ಭಾಗವಹಿಸುತ್ತಾರೆ. ಇವರಲ್ಲಿ ಒಬ್ಬನನ್ನು ಗೌಡನೆಂದು ನೇಮಿಸುತ್ತಾರೆ. ಹಳ್ಳಿಯಲ್ಲಿ ಯಾರಾದರೂ ತಪ್ಪು ಮಾಡಿದರೆ ಪಂಚಾಯ್ತಿ ಸಭೆಯನ್ನು ಸೇರಿಸಿ ತಪ್ಪಿಗೆ ದಂಡಹಾಕಿ ಮುಂದೆ ತಪ್ಪು ಮಾಡದ ಹಾಗೆ ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಇದು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದೆ. ಸಣ್ಣಸಣ್ಣ

ಜಗಳಕ್ಕೂ, ತಪ್ಪಿಗೂ ಪೋಲೀಸ್ ಸ್ಟೇಷನ್‌ಗೆ ಜನ ಹೋಗುತ್ತಾರೆ. ಅದರಲ್ಲೂ ಬಗೆಹರಿಯುವ ಆರ್ಥಿಕವಾಗಿ ಸದೃಢರಾಗಿರುವವರು ಕೆಲವು ಸಮಸ್ಯೆಗಳನ್ನು ಕೋರ್ಟಿನ ಮೂಲಕ ಬಗೆಹರಿಸಿಕೊಳ್ಳುತ್ತಿರುವುದನ್ನು ಕಾಣಬಹುದು.

ಮೊದಲು ಚಾಮುಂಡೇಶ್ವರಿ ಕ್ಷೇತ್ರದ ವ್ಯಾಪ್ತಿಯಲ್ಲಿದ್ದ ಈ ಗ್ರಾಮ ೨೦೦೮ರಲ್ಲಿ ಕ್ಷೇತ್ರ ಪುನರ್‌ವಿಂಗಡನೆಯ ನಂತರ ವರುಣಾ ವಿಧಾನಕ್ಷೇತ್ರ ವ್ಯಾಪ್ತಿಯಲ್ಲಿದೆ. ಈ ಗ್ರಾಮದಲ್ಲಿ ಮೊದಲು ಒಂದೇ ಪಕ್ಷವನ್ನು ಬೆಂಬಲಿಸುತ್ತಿದ್ದರು. ಆದರೆ ಇತ್ತೀಚೆಗೆ ಕೆಲವು ವಿದ್ಯಾವಂತ ಮತ್ತು ಬುದ್ಧಿವಂತರು ಇಂದು ಹಲವು ಪಕ್ಷಗಳನ್ನು ಬೆಂಬಲಿಸುತ್ತಿದ್ದಾರೆ. ಇಂದಿನ ರಾಜಕೀಯ ಪ್ರತಿಯೊಂದು ಹಳ್ಳಿಯ ಮೇಲೆ ಯಾವ ಪರಿಣಾಮ ಬೀರುತ್ತದೆ ಎಂದರೆ ಅದನ್ನು ಕಲ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಪರಸ್ಪರ ಜಾತಿ ವೈಷಮ್ಯ, ಜಗಳ, ದ್ವೇಷ, ಅಸೂಯೆಗಳನ್ನು ರಾಜಕೀಯ ನಿರ್ಮಾಣ ಮಾಡುತ್ತಿದೆ. ಅಲ್ಲದೆ ಒಂದೇ ಕುಟುಂಬದ ಜನ ನಾನಾ ಪಕ್ಷಕ್ಕೆ ಸೇರಿ ಇದರಿಂದ ಎಷ್ಟೋ ಪ್ರಾಣಹಾನಿ, ಜಗಳ ಆಗುತ್ತಿರವುದನ್ನು ಕಾಣಬಹುದಾಗಿದೆ.

**ಇ) ಶೈಕ್ಷಣಿಕ ಸ್ಥಿತಿಗತಿ:** ಹಿಂದೆ ಶಿಕ್ಷಣ ವ್ಯವಸ್ಥೆ ಗುರು ಕುಲಗಳಲ್ಲಿ ನಡೆಯುತ್ತಿತ್ತು. ಕಾಲ ಬದಲಾದಂತೆ ಶಿಕ್ಷಣದ ಕೆಲವು ಹಂತಗಳು ಸಹ ಬದಲಾದವು. ಹಿಂದೆ ಅಕ್ಷರ ಕಲಿಯಲು ಊರಿಂದ ಊರಿಗೆ ಕಾಲು ನಡಿಗೆಯಲ್ಲಿ ಹೋಗಬೇಕಾದ ಪರಿಸ್ಥಿತಿಯಿತ್ತು. ಆದರೆ ಇತ್ತೀಚಿನ ವರ್ಷಗಳೆಲ್ಲ ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲಿಯೂ ಶಾಲೆ ಇರುವುದನ್ನು ನೋಡಬಹುದು. ಉತ್ತನಹಳ್ಳಿ ಗ್ರಾಮದಲ್ಲಿ ೧೯೮೦ರಲ್ಲಿ ಆರಂಭವಾದ ಒಂದು ಸರ್ಕಾರಿ ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಯಿದೆ. ಅಂಗನವಾಡಿ ಮತ್ತು ಖಾಸಗಿಯವರ ಶಿಶು ವಿಹಾರವಿದೆ. ಈ ಗ್ರಾಮದಲ್ಲಿ ಶೇ. ೩೫ರಷ್ಟು ಜನ ವಿದ್ಯಾವಂತರಿದ್ದಾರೆ. ಇವರಲ್ಲಿ ಶೇ. ೧೦ರಷ್ಟು ಪದವೀಧರರು ಮತ್ತು ಶೇ. ೨೦ರಷ್ಟು ಪದವಿ ಪೂರ್ವದವರಿದ್ದು ಇತ್ತೀಚಿನ ವರ್ಷಗಳಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಆರ್ಥಿಕವಾಗಿ ಸದೃಢರಾಗಿರುವ ಕೆಲವು ಮಂದಿ ತಮ್ಮ ಮಕ್ಕಳನ್ನು ಪ್ರತಿಷ್ಠಿತ ಶಾಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿಸುತ್ತಿದ್ದಾರೆ. ಖಾಸಗಿಯವರ ಪ್ರೌಢಶಾಲೆ ಕೆಲವು ವರ್ಷಗಳಲ್ಲಿ ಈ ಗ್ರಾಮದಲ್ಲಿ ಆರಂಭವಾಗುವ ನಿರೀಕ್ಷೆಯಿದೆ.

**(ಈ) ಆರ್ಥಿಕ ಪರಿಸ್ಥಿತಿ:** ಇಲ್ಲಿನ ಜನರ ಮುಖ್ಯಕಸುಬು ವ್ಯವಸಾಯ. ಮಳೆಯನ್ನೆ ನಂಬಿಕೊಂಡ ಇವರು ತಮ್ಮ ಜೀವನೋಪಯೋಗಕ್ಕಾಗಿ ರಾಗಿ, ಜೋಳ ಮುಂತಾದ ಬೆಳೆಗಳ ಜೊತೆಗೆ ಹಲಸಂದೆ, ಅವರೆ, ಹೆಸರು, ತೊಗರಿ ಮುಂತಾದ ದ್ವಿದಳ

ಧಾನ್ಯಗಳನ್ನು ಬೆಳೆಯುತ್ತಾರೆ. ಕೆಲವು ವಾಣಿಜ್ಯ ಬೆಳೆಗಳಾದ ಕಡಲೆ, ಸೂರ್ಯಕಾಂತಿ ಮತ್ತು ಹತ್ತಿಯನ್ನು ಅಲ್ಪಪ್ರಮಾಣದಲ್ಲಿ ಬೆಳೆಯುತ್ತಾರೆ. ಕೆಂಪು ಮತ್ತು ಮರಳು ಮಿಶ್ರಿತವಾಗಿರುವ ಭೂಮಿಯನ್ನು ಹೊಂದಿದ್ದು ಇಲ್ಲಿ ಹೆಚ್ಚಿನ ಪ್ರಮಾಣದಲ್ಲಿ ರಾಗಿಯನ್ನು ಬೆಳೆಯುತ್ತಾರೆ. ಹಿಂದೆ ಸಾಟಿ ವಿನಿಮಯ ಪದ್ಧತಿಯ ಮೂಲಕ ತಮ್ಮಲ್ಲಿರುವ ವಸ್ತುಗಳನ್ನು ಕೊಟ್ಟು ತಮಗೆ ಬೇಕಾದ ಅಗತ್ಯವಸ್ತುಗಳನ್ನು ಇತರರಿಂದ ತೆಗೆದುಕೊಳ್ಳುವುದು ರೂಢಿಯಲ್ಲಿತ್ತು. ಆದರೆ ಕಾಲಕ್ರಮೇಣ ಈ ಪದ್ಧತಿ ಮರೆಯಾಗಿ ಕೆಲವು ಬದಲಾವಣೆಗಳಾಗಿವೆ. ರೈತರು ತಾವು ಬೆಳೆದ ಬೆಳೆಗಳಲ್ಲಿ ತಮಗೆ ಬೇಕಾದಷ್ಟನ್ನು ಇಟ್ಟುಕೊಂಡು ಉಳಿದುದನ್ನು ಮಾರುಕಟ್ಟೆಗೆ ತೆಗೆದುಕೊಂಡು ಹೋಗಿ ಮಾರಾಟಮಾಡಿ ಬಂದ ಹಣದಿಂದ ತಮಗೆ ಅಗತ್ಯವಿರುವ ವಸ್ತುಗಳನ್ನು ಕೊಳ್ಳುತ್ತಿರುವುದನ್ನು ಕಾಣಬಹುದು.

ಈ ಗ್ರಾಮದಲ್ಲಿ ಶೇ. ೧೦ರಷ್ಟು ಮಂದಿ ಸರ್ಕಾರಿ ನೌಕರಿಯಲ್ಲಿದ್ದಾರೆ. ಉಳಿದಂತೆ ಕೆಲವರು ಖಾಸಗಿಯಾಗಿ ಕೆಲಸಕ್ಕೆ ಹೋಗುತ್ತಾರೆ. ಇಲ್ಲಿನ ಜನರ ಮುಖ್ಯ ಕಸುಬು ವ್ಯವಸಾಯವಾದರೂ ಬೇಸಿಗೆಯ ಕಾಲದಲ್ಲಿ ಕೆಲವೊಂದು ಉಪಕಸುಬುಗಳಾದ ಇಟ್ಟಿಗೆಗೆ ಅಚ್ಚುಹಾಕುವುದು ಮತ್ತು ಗಾರೆಕೆಲಸವನ್ನು ಮಾಡುತ್ತಾರೆ. ಇಲ್ಲಿನ ಜನರು ತಮ್ಮ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಕೆಲವೊಂದು ಹಬ್ಬ ಆಚರಣೆಗಳನ್ನು ಆಚರಿಸುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಕಾವೇರಿನದಿಯ ನೀರು ವರುಣಾನಾಲೆಯ ಮೂಲಕ ಜೀವನದಿಯಾಗಿ ಬಂದಕಾರಣ ಇತ್ತೀಚಿನ ದಿನಗಳಲ್ಲಿ ಭತ್ತವನ್ನು ಬೆಳೆಯುವ ರೈತರಲ್ಲಿ ಸಂತೋಷದ ಕಳೆ ಎದ್ದು ಕಾಣುತ್ತಿದೆ. ಕೆಲವರು ಭತ್ತವನ್ನು ಕೊಯ್ದು ನಂತರ ದ್ವಿದಳ ಧಾನ್ಯಗಳಾದ ಕಾಳುಗಳನ್ನು ಗದ್ದೆಯಲ್ಲಿ ಬೆಳೆಯುತ್ತಾರೆ.

**ಉ) ಧಾರ್ಮಿಕ ಸ್ಥಿತಿಗತಿ:** ಜಾತ್ರೆಗಳು ಮತ್ತು ಉತ್ಸವಗಳ ಜೊತೆಗೆ ಧಾರ್ಮಿಕವಾಗಿ ಕೆಲವು ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳೆಂದರೆ ಮಕೆ ಹಬ್ಬ, ಸಾಲುಮರಿಹಬ್ಬ, ಇವುಗಳ ಜೊತೆಗೆ ಯುಗಾದಿ, ದೀಪಾವಳಿ, ಮಹಾಶಿವರಾತ್ರಿ, ಸಂಕ್ರಾತಿ, ಗೌರಿ ಗಣೇಶ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ.

**(೧) ಮಕೆ ಹಬ್ಬ:**

ಈ ಹಬ್ಬವನ್ನು ಸತ್ತವರಿಗೆ ಎಡೆಹಾಕುವ ಹಬ್ಬವೆಂದು ಸಹ ಕರೆಯುತ್ತಾರೆ ಅಲ್ಲದೆ ಪಕ್ಷವೆಂದು ಕರೆಯುತ್ತಾರೆ. ಈ ಹಬ್ಬ ಆಗಸ್ಟ್ ತಿಂಗಳಿನಲ್ಲಿ ನಡೆಯುತ್ತದೆ. ಹಬ್ಬದ ದಿನ ಮನೆಯನ್ನೆಲ್ಲ ಸ್ವಚ್ಛ ಮಾಡಿರುತ್ತಾರೆ. ಸಾಯಂಕಾಲ ಮರಿಯನ್ನು

ಕೊಯ್ದು ಅದರಿಂದ ಮಾಡಿದ ಅಡುಗೆಯ ಜೊತೆಗೆ, ಸತ್ತವನು ಇಷ್ಟಪಡುತ್ತಿದ್ದ ಎಲ್ಲಾ ತಿಂಡಿತಿನಿಸುಗಳನ್ನು ಸತ್ತವನ ಹೆಸರಿನಲ್ಲಿ ಕಲ್ಲು ನೆಟ್ಟ ಸ್ಥಳಕ್ಕೆ ರಾತ್ರಿಯ ವೇಳೆ ತೆಗೆದುಕೊಂಡು ಹೋಗಿ ಎಡೆಹಾಕಿ ಬರುತ್ತಾರೆ. ಈ ರೀತಿ ನಿಯಮದಂತೆ ಕಾಲಕಾಲಕ್ಕೆ ಎಡೆ ಹಾಕದಿದ್ದರೆ ಜಾನುವಾರುಗಳಿಗೆ ಅಥವಾ ಮಕ್ಕಳಿಗೆ ತೊಂದರೆ ಕೊಡುವ ಮೂಲಕ ಸತ್ತವರು ದೆವ್ವವಾಗಿ ಎಚ್ಚರಿಸುತ್ತಾರೆಂಬ ನಂಬಿಕೆ ಇದೆ. ಅಷ್ಟೇ ಅಲ್ಲ ಮನೆಯ ಬಾಗಿಲು ತೆರೆದು ಹೋಗುವುದು, ಬಾಗಿಲ ಚಿಲಕ ಅಲ್ಲಾಡಿಸುವುದು ಇದೇ ಮೊದಲಾದ ಚೇಷ್ಟೆಗಳಲ್ಲಿ ತೊಡಗಿ ತನ್ನ ಅಸಮಾಧಾನವನ್ನು ಪರೋಕ್ಷವಾಗಿ ಸೂಚಿಸುತ್ತಿದ್ದ ಪ್ರಸಂಗಗಳಿವೆ. ಮನೆಯ ಯಜಮಾನ ಮಹಡಿಯ ಮೇಲೆ ಮಲಗಿದ್ದರೆ ಆತನನ್ನು ಕೆಳಗೆ ತಂದು ಬಿಡುತ್ತಿದ್ದದೂ ಉಂಟು ಎಂಬ ಊಹಾಪೋಹಗಳಿವೆ.

ಮೆಕ್ಕೆ ಹಬ್ಬಕ್ಕೆ ದೂರದ ಊರಿನ ನೆಂಟರೆಲ್ಲರೂ ಆಗಮಿಸಿರುತ್ತಾರೆ. ಅಲ್ಲದೆ ಹೆಣ್ಣು ಮಕ್ಕಳು ಈ ಹಬ್ಬಕ್ಕೆ ತಪ್ಪಿಸಿಕೊಳ್ಳುವಂತಿಲ್ಲ ಎಂಬ ಸಂಪ್ರದಾಯವು ಇದೆ. ಇದು ಪ್ರಕೃತಿ ಆರಾಧನೆಯ ಪಳಿಯುಳಿಕೆಯೂ ಆಗಿರಬಹುದು. ಈ ಹಬ್ಬದಲ್ಲಿ ಮಾಡಿದ ಅಡುಗೆಯನ್ನು ಎಡೆಹಾಕಿದಾಗ ಅಲ್ಲಿಂದ ಯಾವುದೇ ವಸ್ತುವನ್ನು ತೆಗೆದುಕೊಂಡು ಹೋಗಬಾರದೆಂಬ ನಿಯಮ ಇರುವುದರಿಂದ ಅಲ್ಲಿನ ಸಾಮಾನುಗಳನ್ನು ಯಾರೂ ಮನೆಗೆ ಕೊಂಡು ಹೋಗುವ ಸಾಹಸಕ್ಕೆ ಯಾರು ಕೈ ಹಾಕುವುದಿಲ್ಲ.

**೨) ಸಾಲು ಮರಿ ಹಬ್ಬ:**

ಈ ಹಬ್ಬದಲ್ಲಿ ಸಾಲಾಗಿ ನಿಲ್ಲಿಸಿದ ಮರಿಗಳನ್ನು ಮಾರಮ್ಮನ ದೇವಸ್ಥಾನದಲ್ಲಿ ಬಲಿ ಕೊಡುತ್ತಿದ್ದುದರಿಂದ ಸಾಲುಮರಿಹಬ್ಬ ಎಂದಾಯಿತು. ಹಿಂದೆ ಈ ರೀತಿ ಸಾಲು ಮರಿಗಳನ್ನು ರಾತ್ರಿವೇಳೆ ಬಲಿಕೊಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ರೀತಿ ನಡೆಯದೇ ತಮ್ಮ ತಮ್ಮ ಮನೆಗಳಲ್ಲಿಯೇ ದೇವರ ತೀರ್ಥವನ್ನು ತಂದು ಮರಿಗಳಿಗೆ ಹಾಕಿ ಅದು ತಲೆ ಅಲ್ಲಾಡಿಸಿದ ನಂತರ ಬಲಿಕೊಡುತ್ತಾರೆ. ನಂತರ ಅಡುಗೆ ಮಾಡಿ ಬಂದ ಅತಿಥಿಗಳಿಗೆ ಬಡಿಸಿ ಸಂತೋಷದಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬದಲ್ಲಿ ಅಷ್ಟಾಗಿ ನೆಂಟರಿಷ್ಟರು ಬರುವುದಿಲ್ಲ. ಹೆಣ್ಣುಮಕ್ಕಳು ಮಾತ್ರ ಬಂದೇ ಬರಬೇಕು ಎಂದು ಹೇಳುತ್ತಾರೆ. ಈ ಮೇಲ್ಕಂಡ ಹಬ್ಬಗಳ ಜೊತೆಗೆ ಧಾರ್ಮಿಕವಾಗಿ ಬರುವ ಹಬ್ಬಗಳನ್ನು ಇತರೆ ಹಳ್ಳಿಗಳಲ್ಲಿ ಆಚರಿಸುವಂತೆ ಇಲ್ಲಿಯೂ ಆಚರಿಸುತ್ತಾರೆ. ಅವುಗಳೆಂದರೆ

**ಅ) ಯುಗಾದಿ:** ಯುಗಾದಿ ಹಲವಾರು ಜನರ ಬಾಯಲ್ಲಿ 'ಉಗಾದಿ'ಯಾಗಿದೆ. ಸಂಸ್ಕೃತದಲ್ಲಿ 'ಯುಗ' ಎಂದರೆ ವರ್ಷವೆಂದು 'ಆದಿ' ಎಂದರೆ ಆರಂಭ ಎಂದು ಅರ್ಥವಿದೆ. ಹೀಗಾಗಿ ಯುಗಾದಿ ಎಂದರೆ ವರ್ಷಾರಂಭ ಎಂದರ್ಥ. ಗಿಡಮರಗಳು ಚಿಗುರುವ ಈ ಕಾಲದಲ್ಲಿ ಎಲ್ಲವೂ ಹೊಸತನವನ್ನು ಪಡೆದಿರುತ್ತದೆ. ಯುಗಾದಿ ಹಬ್ಬದಂದು ದೇವರ ಪೂಜೆಮಾಡಿ ಬೆಲ್ಲ ಮತ್ತು ಬೇವನ್ನು ಸಮಪ್ರಮಾಣದಲ್ಲಿ ಬೆರೆಸಿ ತಿನ್ನಲಾಗುತ್ತದೆ. ಆ ವರ್ಷದಲ್ಲಿ ಸುಖ ದುಃಖಗಳು ಸಮಪ್ರಮಾಣದಲ್ಲಿ ಬರಲಿ ಎಂಬ ಆಶಯ ಗ್ರಾಮೀಣರದ್ದಾಗಿದೆ. ಬೇವು ಕಷ್ಟಕ್ಕೆ, ದುಃಖಕ್ಕೆ ಸಂಕೇತವಾದರೆ, ಬೆಲ್ಲ ಸುಖದ ಆಶಯವಾಗಿದೆ. ಕೆಲವರು ಈ ದಿನ ಸಾಯಂಕಾಲ ಚಂದ್ರನ ದರ್ಶನವನ್ನು ಮಾಡುತ್ತಾರೆ. ಅಲ್ಲದೆ ಈ ಹಳ್ಳಿಯಲ್ಲಿರುವ ಕಾರ್ಗಳಮ್ಮ ದೇವರ ಉತ್ಸವ ಈ ಹಬ್ಬದಂದೆ ನಡೆಯುವುದರಿಂದ ಎಲ್ಲರೂ ಪೂಜೆ ಮಾಡಿಸುತ್ತಾರೆ.

**ಆ) ದೀಪಾವಳಿ:**

ದೀಪಗಳ ಹಬ್ಬ ದೀಪಾವಳಿ. ಇದು ಮೂರು ನಾಲ್ಕು ದಿನಗಳ ಹಬ್ಬ. ಈ ದಿನ ಮನೆಯ ಪ್ರತಿಯೊಬ್ಬರು ಹಿರಿಯರು ಕಿರಿಯರೆನ್ನದೆ ಎಣ್ಣೆ ಸ್ನಾನ ಮಾಡುತ್ತಾರೆ. ಸಾಯಂಕಾಲ ವಿವಿಧ ರೀತಿಯ ಪಟಾಕಿ, ಬಾಣ ಬಿರುಸುಗಳನ್ನು ಸಿಡಿಸುತ್ತಾರೆ. ನಂತರ ಎಲ್ಲಾರು ಸೇರಿ ವಿಶೇಷ ಅಡುಗೆಯನ್ನು ಮಾಡಿ ಸಂತೋಷದಿಂದ ಊಟ ಮಾಡುತ್ತಾರೆ. ಈ ಹಬ್ಬದಲ್ಲಿ ಪ್ರತಿಯೊಂದು ಜಾನುವಾರುಗಳನ್ನು ತೊಳೆದು ಅವುಗಳಿಗೆ ಬಣ್ಣಗಳಿಂದ ಅಲಂಕಾರ ಮಾಡಿರುತ್ತಾರೆ ಮತ್ತು ವ್ಯವಸಾಯದ ಉಪಕರಣಗಳಿಗೆ ಎಡೆಹಾಕುತ್ತಾರೆ. ಇದಕ್ಕೆ 'ಸರಸ್ವತಿ ಪೂಜೆ' ಎಂದು ಕರೆಯುವುದುಂಟು.

**ಇ) ದಸರಾ ಅಥವಾ ಆಯುಧಪೂಜೆ:**

ಸಾಮಾನ್ಯವಾಗಿ ವರ್ಷದ ಸೆಪ್ಟೆಂಬರ್ – ಅಕ್ಟೋಬರ್ ತಿಂಗಳಿನಲ್ಲಿ ಈ ಹಬ್ಬ ನಡೆಯುತ್ತದೆ. ಇದು ಒಂಬತ್ತು ದಿನಗಳು ನಡೆಯುವ ಹಬ್ಬ. ಈ ಸಮಯದಲ್ಲಿ ಊರಿನಲ್ಲಿರುವ ಪ್ರಮುಖ ದೇವಾಲಯಗಳಾದ ಜ್ವಾಲಾಮುಖಿ ಮತ್ತು ಕಾರ್ಗಳಮ್ಮನವರ ದೇವಾಲಯಗಳಲ್ಲಿ ವಿವಿಧ ರೀತಿಯ ಪೂಜೆ ಮಾಡುತ್ತಾರೆ. ಪ್ರತಿಯೊಂದು ಮನೆಗಳಲ್ಲಿಯೂ ತಮ್ಮಲ್ಲಿರುವ ಉಪಕರಣಗಳಿಗೆ, ಆಯುಧಗಳಿಗೆ ಪೂಜೆಮಾಡುತ್ತಾರೆ. ವಾಹನಗಳಿಗೆ ಪೂಜೆಮಾಡಿ ಬಲಿಕೊಡುವ ಪದ್ಧತಿಯುಂಟು, ನಂತರ ವಿಶೇಷ ಅಡುಗೆಯನ್ನು ಮಾಡಿ ಕುಟುಂಬದ ಸದಸ್ಯರೆಲ್ಲರು ಕಲೆತು ಊಟ ಮಾಡಿ ಸಂತೋಷಪಡುತ್ತಾರೆ.

**ಈ) ಸಂಕ್ರಾಂತಿ:**

ಈ ಹಬ್ಬದಲ್ಲಿ ಜಾನುವಾರುಗಳನ್ನು ತೊಳೆದು ಬಣ್ಣ ಬಳಿಯುತ್ತಾರೆ. ಅಲ್ಲದೆ ಬೆಂಕಿ ಹಾಕಿ ಹಸು, ಎತ್ತು ಮುಂತಾದ ಪ್ರಾಣಿಗಳನ್ನು ಹಾರಿಸುತ್ತಾರೆ. ಇದಕ್ಕೆ ಕಿಚ್ಚು ಹಾಯಿಸುವುದು ಎಂದು ಹೆಸರು. ಇದು ಮುಖ್ಯವಾಗಿ ಹೆಣ್ಣುಮಕ್ಕಳ ಹಬ್ಬ. ಹೆಣ್ಣುಮಕ್ಕಳು ಎಳ್ಳು ಮತ್ತು ಬೆಲ್ಲವನ್ನು ತಮ್ಮ ಸಂಬಂಧಿಗಳಿಗೆ ಮತ್ತು ಸ್ನೇಹಿತರಿಗೆ ವಿನಿಮಯ ಮಾಡಿಕೊಳ್ಳುವುದು ಈ ಹಬ್ಬದ ವಿಶೇಷ.

ಹೀಗೆ ಉತ್ತನಹಳ್ಳಿಯಲ್ಲಿ ಹಬ್ಬ ಆಚರಣೆಗಳನ್ನು ಜನರು ಅವರವರ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಆಚರಿಸುತ್ತಿರುವುದನ್ನು ನೋಡಬಹುದು.

## ಅಧ್ಯಾಯ – ೪

# ಉತ್ತನಹಳ್ಳಿ ದೇವಾಲಯಗಳ ಹುಟ್ಟು ಮತ್ತು ಬೆಳವಣಿಗೆ

ಪ್ರಾಚೀನ ಕಾಲದಲ್ಲಿ ಪ್ರಕೃತಿಯನ್ನೇ ಜನರು ದೇವರೆಂದು ಪೂಜಿಸುತ್ತಿದ್ದರು. ಕಾಲಾನಂತರದಲ್ಲಿ ಅದು ಬದಲಾಗುತ್ತಾ ತಮ್ಮ ವಂಶಕ್ಕೆ, ಕುಲಕ್ಕೆ ಪ್ರತ್ಯೇಕ ದೇವರುಗಳನ್ನು ಮಾಡಿಕೊಳ್ಳುತ್ತಾ, ಮನೆದೇವರು, ಕುಲದೇವತೆ ಎಂದು ಪೂಜೆ ಮಾಡುತ್ತಾ ಬಂದರು. ಹರಪ್ಪ ಸಂಸ್ಕೃತಿಯಲ್ಲಿಯೂ ದೇವರನ್ನು ಪೂಜಿಸುತ್ತಿದ್ದರು ಎಂಬುದಕ್ಕೆ ಆಧಾರಗಳಿವೆ. ಪ್ರಕೃತಿಯಲ್ಲಿ ಮರ, ಗಿಡ, ಪ್ರಾಣಿ, ಪಕ್ಷಿಗಳನ್ನು ಇಂದಿಗೂ ದೇವರೆಂದು ಪೂಜಿಸುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ ಮೈಸೂರಿನ ವ್ಯಾಪ್ತಿಯಲ್ಲಿ ಬರುವ ಕುರುಬಜನಾಂಗದವರಲ್ಲಿ ಬೇವಿನ ಕುಲ ಎಂಬ ಕುಲಕ್ಕೆ ಸೇರಿದವರು ಬೇವಿನ ಮರವನ್ನು ದೇವರೆಂದು ಪೂಜಿಸುತ್ತಾರೆ. ಬೇವಿನ ಮರವನ್ನು ಅವರು ಸೌದೆಗೆ ಉಪಯೋಗಿಸುವುದಿಲ್ಲ. ಪ್ರತಿಯೊಂದು ಜಾತಿ, ಮತದಲ್ಲಿ, ದೇವರಿಗೆ ನಾನಾ ವಿಧಗಳಲ್ಲಿ ಗುಡಿಗಳನ್ನು ಕಟ್ಟಿ ಪೂಜಿಸುತ್ತಾರೆ. ರಾಜರ ಕಾಲದಲ್ಲಿ ಯುದ್ಧದಲ್ಲಿ ಗೆದ್ದ ಸಂತೋಷಕ್ಕಾಗಿ ದೇವಸ್ಥಾನವನ್ನು ಕಟ್ಟಿಸುತ್ತಿದ್ದರು. ಜೊತೆಗೆ ಕೆಲವೊಂದು ಹಳೆಯ ದೇವಸ್ಥಾನಗಳನ್ನು ಜೀರ್ಣೋದ್ಧಾರ ಮಾಡಿಸುತ್ತಿದ್ದರು.

ಗ್ರಾಮದೇವತೆಗಳ ಅವತಾರವನ್ನು ಕುರಿತು ಅವಲೋಕಿಸುವಾಗ ಗಮನಿಸ-ಬೇಕಾದ ಪ್ರಮುಖ ಅಂಶಗಳೆಂದರೆ ಗ್ರಾಮದೇವತೆಗಳು ದ್ರಾವಿಡರ ಕಲ್ಪನೆಯಾಗಿದೆ. ಭಾರತೀಯ ಸಾಂಸ್ಕೃತಿಕ ಚರಿತ್ರೆಯ ಪ್ರವಾಹದಲ್ಲಿ ದ್ರಾವಿಡರು ಉಂಟುಮಾಡಿದ ಪ್ರಭಾವ ಕಡಿಮೆಯೇನಿಲ್ಲ. ಪೂರ್ವ ವೇದಗಳ ಪ್ರಾಚೀನ ಕಾಲದತ್ತ ಕಣ್ಣು ಹಾಯಿಸಿದಾಗ ಗ್ರಾಮದೇವತೆಗಳ ಪರಿಕಲ್ಪನೆ ಆರ್ಯರದು ಎಂದು ಕಂಡು ಬರುತ್ತದೆ. ವೇದಗಳಲ್ಲಿ ಉಲ್ಲೇಖಿತವಾಗಿರುವ ದೇವತೆಗಳು ವನ ದೇವತೆಗಳು ಎಂಬುದು ಸುಸ್ಪಷ್ಟ. ಆದರೆ ಹಿಂದೂ ಮತದ ಅವೈದಿಕ ದೇವತೆಗಳನ್ನು ನೋಡಿದಾಗ ಇವರು ವನದೊಡನೆ ಬೇಟೆಯೊಡನೆಯೂ ಸಂಬಂಧ ಹೊಂದಿರುವುದು ತಿಳಿದು ಬರುತ್ತದೆ. ಒಟ್ಟಿನಲ್ಲಿ ಹಿಂದೂ ಮತದ ಶೈವ ದೇವತೆಗಳೆಲ್ಲಾ ಅವೈದಿಕ ಮತ್ತು ದ್ರಾವಿಡ ದೇವತೆಗಳೆಂದು ಪರಿಗಣಿಸಲ್ಪಟ್ಟಿವೆ. ದಕ್ಷಿಣ ಭಾರತದ ಕೆಲವೆಡೆಗಳಲ್ಲಿ ದೇವಸ್ಥಾನದ ಮಂದಿರವನ್ನು ಪ್ರಕೃತದಲ್ಲಿಯು ಸಹ 'ಕಾಡು' ಎಂದು ಕರೆಯುತ್ತಾರೆ. ಇದರಿಂದಾಗಿಯೆ ದೇವತೆಗಳು ಅರಣ್ಯ ಮತ್ತು ತೋಪುಗಳಲ್ಲಿ ಪೂಜಿಸಲ್ಪಡುತ್ತಿದ್ದವೆಂದು ಕಾಣುತ್ತದೆ. ಇವುಗಳೊಂದಿಗೆ ಸ್ತ್ರೀ ದೇವತೆಗಳ ಅಥವಾ ಮಾತೃ ದೇವತೆಗಳ ಉಗಮಕ್ಕೆ ವೈದಿಕ ದೇವತಾ

ಸಿದ್ಧಾಂತಗಳು ಬೀರಿದ ಪ್ರಭಾವ ಕಾರಣವಾಯಿತೆಂಬ ಪ್ರತಿಪಾದನೆಯಿದೆ. ಅನಂತರ ಕಾಲದಲ್ಲಿನ ವೈದಿಕ ಅಂಶಗಳ ಗಾಢ ದೇವತೆಯು ವಿಶ್ವ ಶಕ್ತಿಯಾದಳು. ವಿಷ್ಣು ಪತ್ನಿಯರಾದ ಶ್ರೀದೇವಿ–ಭೂದೇವಿಯವರು, ಶಿವನ ಅರ್ಧಾಂಗಿ, ಪಾರ್ವತಿ, ಬ್ರಹ್ಮನ ಒಡತಿ ಸರಸ್ವತಿಯೂ ಸಮಾನ ಸ್ಥಾನವನ್ನು ದೊರಕಿಸಿಕೊಂಡರು. ದೇವತೆಗಳ ಪೂಜಾ ಕಾರ್ಯಕ್ಕೆ ನಾಂದಿ ಹಾಡಿದ್ದು ವೇದಾನಂತರದ ಅವಧಿಯಲ್ಲಿಯೇ. ಮಾನವನು ಇತರ ದಾಳಿಯಿಂದ ಮತ್ತು ಭಯದಿಂದ ಪಾರಾಗಲು ಈ ದೇವತೆಗಳನ್ನು ಹುಟ್ಟು ಹಾಕಿದನು ಎನ್ನುವ ಮಾತಿನ ಸಂಶಯಗಳನ್ನು ಕಡಲಲ್ಲಿ ಒಂದು ದಡದ ಮೇಲೆ ನಿಂತು ಬದುಕಲು ಮನಷ್ಯನು ಎಂದು ಆರಂಭಿಸಿದನೋ ಅಂದೇ ದೇವರ ಬಗೆಗಿನ ಮತ್ತು ತನಗಿಂತ ಶ್ರೇಷ್ಠ ಒಂದು ಶಕ್ತಿಯಲ್ಲಿನ ಭಯ, ಭಕ್ತಿಗಳು ತಮ್ಮ ನೆಲೆ ಪಡೆದುಕೊಂಡವು. ಯಾವಾಗ ಮಾನವನು ಈ ರೀತಿ ಪರದೊಂದು ಶಕ್ತಿಯನ್ನು ನಂಬಿ ಆತನು ಆ ಶಕ್ತಿಯಲ್ಲಿ ಪೂಜೆ ಭಕ್ತಿಯನ್ನು ಕೈಗೊಳ್ಳುತ್ತಾ ಒಂದು ಸಂಪ್ರದಾಯವಾಗಿ ಮಾಡಿಕೊಂಡನೊ ಅಂದಿನಿಂದಿ ಈ ದೇವತೆಗಳು ಅನಂತತೆ ಸ್ಥಾನವನ್ನು ಪಡೆದುಕೊಂಡವು. ಆರ್ಯ ಪರಿಕಲ್ಪನೆಗಳ ಒಂದು ಮೇಲ್ಪಂಕ್ತಿಯ ಪ್ರಭಾವ ಅರಣ್ಯದಲ್ಲಿ ದೇವತೆಗಳನ್ನು ಪೂಜಿಸುವ ಪ್ರಭಾವ ಅನಂತರದ ಅನುಕರಣೆ ಮನೆ–ಮನೆಗಳಲ್ಲಿ ದೇವಸ್ಥಾನಕ್ಕೆ ಒಂದು ನಿರ್ದಿಷ್ಟವಾದ ಸ್ಥಳವನ್ನು ನಿರ್ಮಿಸಲು, ನಿರ್ಮಿಸಿ ಪೂಜಿಸಲು ಕಾರಣವಾಯಿತು.

ಗ್ರಾಮ ದೇವತೆಗಳೆಂದರೆ ಸಾಮಾನ್ಯವಾಗಿ ನಮ್ಮ ಅರಿವಿಗೆ ಬರುವುದು ಹೆಣ್ಣು ದೇವತೆಗಳು. ಈ ದೇವತೆಗಳು ಮಾತೃ ಪ್ರಾಧಾನ್ಯತೆಯ ಕುಟುಂಬವನ್ನುಳ್ಳ ಸಾಮಾಜಿಕ ಹಿನ್ನೆಲೆಯಲ್ಲಿ ವಿಶೇಷವಾಗಿ ಗುರುತಿಸಬಹುದು. ಮನುಷ್ಯ ಈ ದೇವತೆಗಳ ಸೃಷ್ಟಿಗೆ ಪ್ರಮುಖವಾಗಿ ಸ್ವಾರ್ಥತೆ ತನ್ನ ಪರವಾದ ಒಳಿತನ್ನು ಮೂಲವಾಗಿರಿಸಿಕೊಂಡನು. ಮಾನವನು ಸ್ವಭಾವತಃ ಸಂಘ ಜೀವಿಯಾಗಿ ತನ್ನ ಕಷ್ಟಕಾರ್ಪಣ್ಯಗಳು, ನೋವು ನಲಿವುಗಳು ತನ್ನ ಮೇಲೆ ಎರಗಿದಾಗ ಪರಸ್ಪರ ಸಹಾಯ, ಸಹಕಾರ, ಸಂತೋಷವನ್ನು ಹಂಚಿಕೊಳ್ಳಬೇಕೆಂಬ ತುಡಿತ ಸಹಜವಾದದ್ದೆ, ಇದರಿಂದಾಗಿ ಯಾವೊಂದು ಶಕ್ತಿಗೋ ಅಥವಾ ತನ್ನ ಅರಿವಿಗೆ ನಿಲುಕದ ಯಾವುದೋ ಅಂಶಕ್ಕೆ ಹೆದರಿಕೊಂಡು ಗೌರವಿಸಿ, ಪ್ರಾಮಾಣಿಕ ಬದುಕಿಗೆ, ಶ್ರಮಕ್ಕೆ ಒಳಪಡುತ್ತಾನೆ. ಅನಂತರದ ಶತಮಾನಗಳಲ್ಲಿ ಹುಟ್ಟಿಕೊಂಡ ವೈಚಾರಿಕ ಕ್ರಾಂತಿಯೇ ಆದರೂ ಮುನುಷ್ಯತ್ವದ ಉಳಿವಿಗೋಸ್ಕರ ದೇವರಿಗೆ ಶರಣಾಗಿ ಅಲ್ಲದಿದ್ದರೂ ಇನ್ನೊಂದು ರೀತಿ ಮೌಲ್ಯಕ್ಕೆ, ಧ್ಯೇಯಕ್ಕೆ ಕಟ್ಟುಬಿದ್ದು ಅವುಗಳನ್ನು ಗೌರವಿಸುವ ಮೂಲಕ ಅವುಗಳಿಗೆ ಮಾರುಹೋಗಿ ಅಳುಕಿನಿಂದ

ಪ್ರಾಮಾಣಿಕ ಬದುಕಿಗೆ ಮಾನವೀಯತೆಯ ಸಫಲತೆಗೆ ಕಾರಣವಾದಂತಾಯಿತು. ಕಾಲ ಚಕ್ರಗಳುರುಳಿದಂತೆ ಆತನ ದೃಷ್ಟಿಕೋನ ಬದಲಾಯಿತೇ ವಿನಃ ಅದರ ಉದ್ದೇಶ ಬದಲಾಗಲಿಲ್ಲ. ಮಾನವನ ಸಹಜ ಹಾಗೂ ಬದುಕಿನ ಒಂದು ಭಾಗದಂತೆ ಇರುವ ಬದಲಾವಣೆಯೆಂದರೆ ಸಂಪ್ರದಾಯಬದ್ಧವಾಗಿ ಅವಶೇಷವೆಂಬಂತೆ ಉಳಿದುಕೊಂಡು-ಬಂದ ಪೈಶಾಚಿಕ ಕರ್ಮಗಳು ಮೌಢ್ಯಗಳು ಅಳಿದವು. ಮನುಷ್ಯನು ದೇಹಕ್ಕಂಟಿದ ಕೊಳೆಯನ್ನು ತೊಳೆಯುವಂತೆ ಅಂಧತ್ವವನ್ನು ನಿವಾರಿಸಲು ಕಾರಣವಾಯಿತು. ಜನಪದರ ಜೀವನ ಶೈಲಿಯನ್ನು, ದೃಷ್ಟಿಕೋನವನ್ನು ಶಕ್ತಿ ಸ್ವರೂಪಿಣಿಗಳಾದ ಗ್ರಾಮ ದೇವತೆಗಳು ಪ್ರತಿನಿಧಿಸುತ್ತವೆ. ಈ ದೇವತೆಗಳನ್ನು ಆರಾಧಿಸುವ ಮೂಲಕ ಗ್ರಾಮದ ಸಮಸ್ತ ಜನರು ತಮ್ಮ ಸಂಕುಚಿತ ಮನೋಭಾವವನ್ನು ತೊರೆದು ವಿಶಾಲತೆಯಿಂದ ಭಾಗವಹಿಸಿ ತಮ್ಮ ಬದುಕು ಹಾಗೂ ನೆರೆಯವರ ಸಂಕಷ್ಟಗಳಲ್ಲಿ ಪಾಲ್ಗೊಂಡು ಒಂದು ರೀತಿಯಲ್ಲಿ ಗೌರವದಿಂದ ಕಾಣುತ್ತಾರೆ. ಜನಪದರಲ್ಲಿ ಎಂದೂ ಇದ್ದ ಹಾಗೆಯೇ ಅದೇ ರೀತಿಯಲ್ಲಿ ಕಾಣಬರುವುದಿಲ್ಲ. ಆದರೆ ಸಹಜ ಜೀವನದಲ್ಲಿ ಮಾತ್ರ ಪ್ರತ್ಯೇಕತೆ ಮನೆ ಮಾಡಿಕೊಂಡಿರುತ್ತದೆ. ಜನಪದರು ತಮ್ಮ ಬದುಕಿನ ಪ್ರತೀಕಗಳೆಂಬ ದೇವತೆಗಳ ಆಕಾರ, ರೂಪ ಮತ್ತು ಈ ಬಗೆಯ ಕುರಿತು ಸಂಪ್ರದಾಯ ಆಚರಣೆಗಳನ್ನು ರೂಢಿಸಿಕೊಂಡಿರುತ್ತಾನೆ. ಮೂಲಭೂತವಾಗಿ ಯಾವ ಶಿಷ್ಟ ಸಂಪ್ರದಾಯ ವ್ರತಗಳಿಗೂ ಜನಪದ ಜೀವನ ಧ್ಯೇಯ ಮೌಲ್ಯಗಳು ಸವಾಲೆಸೆಯಬಲ್ಲವು. ಮನುಷ್ಯತ್ವದ ಪರಾಕಾಷ್ಠೆಯ ಪ್ರತಿಪಾದನೆ ಕಂಡು ಬರುವುದು ಕೊನೆಗೆ ಜನಪದರಲ್ಲಿಯೆ. ಇದರಿಂದಾಗಿ ತಮ್ಮದೇ ಆದ ಮೌಲ್ಯ ಜೀವನ ಕ್ರಮಗಳನ್ನು ಜನಪದರಲ್ಲಿ ಕಾಣುತ್ತೇವೆ. ಹಲವಾರು ಮುಖಗಳಲ್ಲಿ ಮನುಷ್ಯತ್ವ ಕಾಣಿಸಿಕೊಳ್ಳುತ್ತದೆ. ಅಯೋಗ್ಯರನ್ನು ಜನಪದರು ಎಂದು ಮನ್ನಿಸುವುದಿಲ್ಲ. ಏಕೆಂದರೆ ಜೀವನಾನುಭವದಿಂದ ಹುಟ್ಟಿದ ಅವರ ಬದುಕು ಸದಾ ಭಯ, ಸ್ವಾರ್ಥ, ಅಪ್ರಾಮಾಣಿಕತೆ, ಮೈಗಳ್ಳತನ, ಸಾವು ಈ ಎಲ್ಲಾ ಸತ್ಯಗಳ ವಿರುದ್ಧ ಹೋರಾಟವನ್ನು ಪ್ರತಿಪಾದಿಸುತ್ತಾರೆ.

ಮೊದ ಮೊದಲು ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆ ನಿಂತಾಗ ಸಮುದಾಯದ ಕಲ್ಪನೆ ಬಂದು ತನ್ನನ್ನು ತಾನು ತಿಳಿದುಕೊಳ್ಳುತ್ತಾ ನಡೆದನು. ಜೀವನದ ಪ್ರಯಾಣದಲ್ಲಿ ಸಂಭವಿಸುವ ಸಾವು, ನೋವು, ಸುಖ, ದುಃಖಗಳತ್ತ ಚಿಂತಿಸತೊಡಗಿದನು. ಈ ನಡುವೆ ತನ್ನಷ್ಟಕ್ಕೆ ತಾನೆ ಘಟಿಸುವ ಗುಡುಗು, ಮಿಂಚು, ಮಳೆಯ ಬಗ್ಗೆಯೂ ಆಲೋಚಿಸಿ ತನಗಿಂತ ಒಂದು ಹಿರಿಯದಾದ ಶಕ್ತಿ ಇದೆ ಎಂದು ಬಗೆದು ಭಯ ಆತಂಕದಿಂದ ಕಂಗಾಲಾಗಿ ಆ ಶಕ್ತಿಯನ್ನು ಗೌರವದಿಂದ ಕಾಣಲು

ತೊಡಗಿದನು. ಯಾವುದೇ ಗಿಡ, ಮರ, ಕಲ್ಲಿಗೂ ಒಂದು ಆಕಾರವನ್ನು ಕೊಡುವುದರ ಮೂಲಕ ತನ್ನನ್ನು ತಾನು ಸಮರ್ಪಿಸಿಕೊಂಡು ತನಗಿಷ್ಟವಾದ ಆಹಾರ ಪದಾರ್ಥಗಳು ಇದಕ್ಕೂ ಇಷ್ಟವೆಂದು ಬಗೆದು ತನ್ನ ಆತ್ಮ ರಕ್ಷಣೆಯ ಹೊಣೆಯನ್ನು ಅದರ ಕೈಲಿರಿಸಿದ. ತಾನುಟ್ಟ ರೀತಿಯಲ್ಲಿಯೇ ಚರ್ಮದಿಂದ ಇಲ್ಲವೇ ತೊಗಟೆಯಿಂದ ಮೈಮುಚ್ಚಿದ. ಹೀಗೆ ಆ ವಿಗ್ರಹಕ್ಕೆ ದೈವೀ ಸ್ವರೂಪವನ್ನು ನೀಡಿ ಅನಂತರ ಪಾರಂಪರಿಕವಾಗಿ ಪೂಜಿಸಿಕೊಂಡು ಬಂದದ್ದನ್ನು ಕಾಣಬಹುದು.

ಮಾನವನ ಸಹಜ ಗುಣವೆಂದರೆ ಬದಲಾವಣೆ. ತಾನು ಬದಲಾದಂತೆ ತನ್ನ ಕಲ್ಪನೆಯ ದೇವತೆಗಳಲ್ಲು ಬದಲಾವಣೆ ಕಂಡುಕೊಂಡನು. ಮಾನವನು ಈ ಗ್ರಾಮ ದೇವತೆಗಳಿಗೆ ನಾಲ್ಕು ಕೈಗಳನ್ನು, ಒಂದು ತಲೆ ಎರಡು ಕಾಲುಗಳನ್ನು ಕೆಲವು ದೇವತೆಗಳಿಗೆ ಎಂಟು ಕೈಗಳನ್ನು ನೀಡಿದನು. ಒಂದೊಂದು ಕೈಯಲ್ಲಿ ನೀಡಿದ ಆಯುಧ, ತೊಟ್ಟ ವಸ್ತ್ರ ಆಭರಣ ಇವುಗಳು ಜಾನಪದ ಜೀವನದ ಕೆಲವು ಪ್ರಮುಖ ಅಂಶಗಳನ್ನು ಪ್ರತಿನಿಧಿಸುತ್ತವೆ. ಆದಿಮಾನವ ಸಮುದಾಯದಲ್ಲಿ ಬೇಸಾಯ ಗೊತ್ತಿರದ ಕಾಲದಲ್ಲಿ ಮಾಂಸಾಹಾರವನ್ನೆ ಉಪಯೋಗಿಸುತ್ತಿದ್ದನು. ಈ ಮಾಂಸಾಹಾರವನ್ನೆ ತನ್ನ ಕಲ್ಪನೆಯ ದೇವತೆಗಳಿಗೆ ಅರ್ಪಿಸಿದನು. ಸುಲಭವಾಗಿ ಹಿಡಿದು ಪಳಗಿಸಬಹುದಾದ ಕೋಣ, ಮೇಕೆ, ಕುರಿಗಳನ್ನು ಬಲಿಯನ್ನಾಗಿ ನೀಡಿ ದೇವತೆಗಳನ್ನು ಒಲಿಸಿಕೊಳ್ಳಲು ಮುಂದಾದನು. ಕ್ರೂರ ಮೃಗ, ಜಂತುಗಳನ್ನು ವಾಹನವಾಗಿ ನೀಡಿದನು. ಈ ಕ್ರೂರ ಮೃಗಗಳಿಂದ ತಾನು ರಕ್ಷಣೆ ಪಡೆಯಲು ದೇವತೆಗಳ ಮೊರೆ ಹೋದನು.

ದೇವತೆಗಳ ಮೂಲ ಸೃಷ್ಟಿಗೆ ಕಾರಣ ಏನೇ ಇದ್ದರೂ ಅದರಿಂದ ಸಮಾಜದ ಒಳಿತು ಸಾಧ್ಯವಾಗಿದೆ ಎನ್ನಬಹುದು. ಗ್ರಾಮೀಣ ಜನರಲ್ಲಿ ತಮ್ಮದೇ ಆದ ಜೀವನ ಮೌಲ್ಯ, ಕ್ರಮಗಳನ್ನು ಕಾಣುತ್ತೇವೆ. ವಿವಿಧ ಮುಖಗಳಲ್ಲಿ ಮನುಷ್ಯತ್ವ ಗೋಚರಿಸುತ್ತದೆ. ಅಪ್ರಮಾಣಿಕರನ್ನು ಇವರು ಮನ್ನಿಸುವುದಿಲ್ಲ. ಅಂತಹವರನ್ನು ಕಳ್ಳರನ್ನಾಗಿ ಕಾಣುತ್ತಾರೆ. ತಮ್ಮ ನಂಬುಗೆಯ ಮೌಲ್ಯಗಳೆ ಅವರನ್ನು ನಾಶಗೊಳಿಸುತ್ತವೆ ಎಂದು ಬಲವಾಗಿ ನಂಬುತ್ತಾರೆ.

**ಮಾರಮ್ಮನ ಶಕ್ತಿ ಸ್ವರೂಪದ ಬೆಳವಣಿಗೆ**

ಮಾರಮ್ಮನು ಶಕ್ತಿ ದೇವತೆಯಾಗಿ ದುಷ್ಟಶಕ್ತಿಯ ವಿರುದ್ಧ ಹೋರಾಡುವವಳಾಗಿ ಜನರ ದುಃಖವನ್ನು ಹೋಗಲಾಡಿಸುವವಳಾಗಿ ಕಂಡು ಬರುತ್ತಾಳೆ.

**ಮಾರಿ ಪದದ ನಿಷ್ಪತ್ತಿ**

ಶಕ್ತಿ ದೇವತೆಯ ಅವತಾರ ಎಂದು ನಂಬಲಾದ ಒಂದು ಗ್ರಾಮ ದೇವತೆ. ಗ್ರಾಮದ ಹೊರಗೆ ನೆಲೆಸಿರುವ ಈ ದೇವತೆ ಗ್ರಾಮಕ್ಕೆ ಒದಗುವ ತೊಂದರೆ, ಕೆಡಕು, ಬಾದೆಗಳು, ಸಾಂಕ್ರಾಮಿಕ ಜಾಡ್ಯಗಳು ಮುಂತಾದವುಗಳನ್ನು ಪರಿಹರಿಸಿ ಗ್ರಾಮದಲ್ಲಿ ಶಾಂತಿ–ನೆಮ್ಮದಿ ನೆಲೆಸುವಂತೆ ಮಾಡುವಳೆಂಬ ನಂಬಿಕೆ ಜನರಲ್ಲಿದೆ. ಈಕೆ ಒಲಿದರೆ ದೇವತೆ, ಮುನಿದರೆ ಕ್ರೂರತೆ ಎಂದು ಬಗೆದ ಜನರು ಈಕೆಯನ್ನು ಪ್ರಸನ್ನಳಾಗಿಸಲು ವರ್ಷಕ್ಕೊಮ್ಮೆ ಜಾತ್ರೆಗಳನ್ನು ಮಾಡುವುದರ ಮೂಲಕ ಕುರಿ, ಮೇಕೆ, ಕೋಳಿ, ಕೋಣಗಳನ್ನು ಬಲಿಕೊಡುವ ಸಂಪ್ರದಾಯವನ್ನು ನದೆಸಿಕೊಂಡು ಬರುತ್ತಿದ್ದಾರೆ.

'ಮಾರಿ' ಎಂಬ ಪದ ನಿಷ್ಪತ್ತಿನ ಬಗ್ಗೆ ಅನೇಕ ಚರ್ಚೆಗಳು ನಡೆದಿವೆ. 'ಮಹೇಶ್ವರಿ' ಎಂಬುದೇ ಮಾರಿ ಆಗಿದೆ ಎಂಬುದು ಒಂದು ವಾದ. ಈಕೆ ಶಕ್ತಿ ದೇವತೆಯಾದುದರಿಂದ ದೇವಾನು ದೇವತೆಗಳ ಎಲ್ಲಾ ರೀತಿಯ ಆಯುಧಗಳಿಂದಲೂ, ಶಕ್ತಿಯಿಂದಲೂ ರೌದ್ರಾವತಾರ ಪಡೆದು ಮಹಿಷಾಸುರನನ್ನು ಕೊಂದು ಚಾಮುಂಡೇಶ್ವರಿಯಾದ ಇವಳನ್ನು 'ಮಹಿಷಾಸುರ ಮರ್ದಿನಿ' ಎಂದು ತಿಳಿದು ಅನಂತರ ಈಕೆಯೇ ಮಾರಿ ದೇವತೆಯಾಗಿ ಪೂಜಿಸಲ್ಪಡುತ್ತಿದ್ದಾಳೆ ಎಂಬುದು ಮತ್ತೊಂದು ವಾದ.

ಒಂದು ಕಥೆಯ ಪ್ರಕಾರ ಮರದೇವತೆ 'ಮರಮ್ಮ' ಎಂಬುದರಿಂದ 'ಮಾರಮ್ಮ' ಎಂದಾಗಿದೆ ಎಂಬ ಮಾತಿದೆ. ದಕ್ಷಿಣ ಭಾರತದ ಬಹು ಪಾಲು ಗ್ರಾಮ ದೇವತೆಗಳು ಶಕ್ತಿ, ಮಳೆ, ಪೈರು, ರೋಗದಿಂದ ರಕ್ಷಣೆ ಪಡೆಯಲು ಹಳ್ಳಿಗರು ಪೂಜಿಸುವ ದೇವತೆಗೆ ಹಳ್ಳಿ ಹಳ್ಳಿಯಲ್ಲೂ ಗ್ರಾಮ ದೇವತೆಗಳಲ್ಲಿಯೆ ಹೆಚ್ಚು ಪ್ರಚಲಿತವಾದ ಒಂದು ಹೆಸರು ಅದೇ ಮಾರಮ್ಮ ಅಥವಾ ಮರಿಯಮ್ಮ.

**ಮಾರಮ್ಮನ ವೈಜ್ಞಾನಿಕ ಹುಟ್ಟು**

ದ್ರಾವಿಡ ದೇವತೆಗಳನ್ನು ಕ್ಷುದ್ರ, ಉಗ್ರ, ರೌದ್ರ ಸ್ವಭಾವದವರೆಂದು ಕರೆಯುವುದುಂಟು. ಆರ್ಯರಿಗಿಂತ ಮೊದಲು ಭರತ ಖಂಡದಲ್ಲಿ ದ್ರಾವಿಡರು ಬಂದು ನೆಲೆಸಿದ್ದರೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆರ್ಯರು ಬಹಳ ಭಾವುಕರೂ, ಸೌಮ್ಯ ಸ್ವಭಾವದವರೂ ಆಗಿದ್ದು ಅವರು ಸೌಮ್ಯ ಶಕ್ತಿ ದೇವತಾರಾಧಕ–ರಾಗಿದ್ದರು. ಪ್ರಾತಃಕಾಲದ ಸೌಮ್ಯ ಸೌಂದರ್ಯವನ್ನು ರಮಣೀಯ ರೂಪಗಳಲಿ ಉಷಾ ದೇವಿಯ ಸ್ವರೂಪವನ್ನು ಕಲ್ಪಿಸಿಕೊಂಡು ಪೂಜಿಸ ತೊಡಗಿದಂತೆಯೇ,

ಪ್ರಕೃತಿಯ ಭಯಂಕರ ಹಾಗೂ ರೌದ್ರ ರೂಪಗಳಾದ ಬಿರುಗಾಳಿ, ಪ್ರಳಯ, ಗುಡುಗು, ಮಿಂಚು ಸಿಡಿಲಿನ ಆರ್ಭಟಗಳು ಚಂಡ ಮಾರುತಗಳ ಭೀಕರತೆಗಳಲ್ಲಿ ರುದ್ರನ ಕಲ್ಪನೆಯನ್ನು ಮಾಡಿ ರೌದ್ರ ಶಕ್ತಿಯನ್ನು ಸ್ತ್ರೀ ರೂಪದಲ್ಲಿ ಕಲ್ಪಿಸಿ ಉಗ್ರದೇವತಾರಾಧನೆಯನ್ನು ರೂಪಿಸಿರಬಹುದೆಂದು ಅಭಿಪ್ರಾಯಪಡಲು ಅನೇಕ ಆಧಾರಗಳಿವೆ. ಆರ್ಯರು ದ್ರಾವಿಡರನ್ನು ರಾಕ್ಷಸರೆಂದೂ ಕರೆಯುತ್ತಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ರೌದ್ರ ದೇವತೆಗಳ ಹುಟ್ಟಿನ ವಿಚಾರಗಳು ದ್ರಾವಿಡರಲ್ಲಿ ಹೇಗೆ ನೆಲೆಸಿರಬಹುದು ಎಂಬುದಕ್ಕೆ ಡಾ. ಆರ್.ಜಿ.ಭಂಡಾರ್ಕರ್ ರವರು ಹೇಳುವಂತೆ "ಪ್ರಕೃತಿಯ ವೈಪರೀತ್ಯಗಳಿಂದುಂಟಾಗುವ ವಿಕೋಪಗಳು ಭಯಂಕರ ಹಾಗೂ ವಿನಾಶಕಾರಿ ರೂಪವನ್ನು ತಳೆದು ಅನೇಕ ಹೆಮ್ಮರಗಳನ್ನು ಬುಡಮೇಲು ಮಾಡಿ, ಮನೆ-ಮರಗಳನ್ನು ನಾಶ ಮಾಡುತ್ತಿದ್ದವು. ಭೀಕರ ಗುಡುಗು ಸಿಡಿಲಿಗೆ ತುತ್ತಾದ ಪಶು, ಪಕ್ಷಿ ಮಾನವರು ಕೆಲವೇ ನಿಮಿಷಗಳಲ್ಲಿ ಸಾವನ್ನಪ್ಪುತ್ತಿದ್ದರು ಎಂದು ತಿಳಿಯುತ್ತದೆ."

**ಮಾರಮ್ಮನ ಐತಿಹ್ಯಗಳು**

ಪ್ರೊ. ಹಿ.ಚಿ. ಬೋರಲಿಂಗಯ್ಯನವರು ಮಾರಮ್ಮನನ್ನು ಹೀಗೆ ಗುರುತಿಸಿದ್ದಾರೆ "ಸಾಮಾನ್ಯವಾಗಿ ಅನೇಕರು ಮಾರಮ್ಮನ ಪ್ರತಿರೂಪವನ್ನು ಮರದಿಂದ ಕೆತ್ತಿರುತ್ತಾರೆ. ಅದೇ ರೀತಿ ಕಲ್ಲುಗಳನ್ನು ಸಹ ಸ್ತ್ರೀ ರೂಪದಂತೆ ಕೆತ್ತಿರುವುದು ಇದೆ. ಇಲ್ಲಿ ಮಾರಮ್ಮ ಎಂಬುದು ಕೇವಲ ವೃಕ್ಷ ದೇವತೆ ಸಸ್ಯ ಸಂರಕ್ಷಣೆ ಎಂದು ವ್ಯಾಖ್ಯಾನಿಸಿ ಸ್ತ್ರೀ ದೇವತೆಯನ್ನು ಕಾಡಿಗೆ ಅಲ್ಲದೇ ಬುಡಕಟ್ಟು ಜನರ ಸಂಸ್ಕೃತಿಗೆ ಸೀಮಿತಗೊಳಿಸಿದಂತಾಗುತ್ತದೆ. ಅಲ್ಲದೆ ಮಾರಮ್ಮ ಪದ ಕೇವಲ ಮರದಮ್ಮ ಎಂಬುದರಿಂದ ಮಾತ್ರ ಹುಟ್ಟದೆ ಎಂಬುದು ಸೂಕ್ತವಲ್ಲ. ಆದ್ದರಿಂದ ಮಾರಮ್ಮ ದೇಶ ಸಂಸ್ಕೃತಿಯಿಂದ ಹುಟ್ಟಿದೆ ಎಂದು ತಿಳಿಯುತ್ತದೆ."

ಡಾ. ಸಿದ್ದಲಿಂಗಯ್ಯನವರು ಮಾರಮ್ಮನನ್ನು ಕುರಿತು ಈ ರೀತಿ ಹೇಳಿದ್ದಾರೆ. "ದೇಶಿ ಜನರಲ್ಲಿ ವಿಶೇಷವಾಗಿ ಹೆಂಗಸರಲ್ಲಿ ಅಸಹಜ ವಿಚಿತ್ರ ರೀತಿಯ ಸಾವು, ಭಯ ಭೀತಿ ಹುಟ್ಟಿಸುತ್ತದೆ. ಅಂತಹವರು ಪ್ರೇತಾತ್ಮಗಳಾಗಿ ಜನರನ್ನು ಕಾಡುತ್ತಾರೆ. ಅಂತಹವರಿಗೆ ಶಾಂತಿ ಕಾರ್ಯ ಮಾಡಬೇಕೆಂಬುದನ್ನು ನಂಬುತ್ತಾರೆ. ಇಂತಹವರಿಗೆ ಮಾಡಲಾಗುವ ಭೂಶಾಂತಿ ಕ್ರಿಯೆಗಳು ಕ್ರಮೇಣ ಈ ಮಾರಿ ದೇವತೆಗಳ ಕಲ್ಪನೆ ಮತ್ತು ಮಾರಿ ಹಬ್ಬದ ಪ್ರೇರಣೆಗಳಾಗುತ್ತದೆ".

ಅಂತೆಯೇ ಮೈಸೂರಿನ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿರುವ ಉತ್ತನಹಳ್ಳಿ-ಯಲ್ಲಿಯೂ ಹಲವು ದೇವಸ್ಥಾನಗಳಿವೆ. ಆ ದೇವಾಲಗಳೆಂದರೆ:

ಅ) ಜ್ವಾಲಾಮುಖಿ ತ್ರಿಪುರಸುಂದರಿ ದೇವಸ್ಥಾನ

ಆ) ಈಶ್ವರನ ದೇವಸ್ಥಾನ

ಇ) ಕಾರ್ಗಳಮ್ಮನ ದೇವಸ್ಥಾನ

ಈ) ಮಾರಮ್ಮನ ದೇವಸ್ಥಾನ

ಉ) ಶನಿದೇವರ ದೇವಸ್ಥಾನ

**ಅ) ಜ್ವಾಲಾಮುಖಿ ತ್ರಿಪುರಸುಂದರಿ ದೇವಸ್ಥಾನ:** ಮೈಸೂರಿನ ರಾಜಮನೆತನದ ಅಧಿದೇವತೆಯಾದ ಚಾಮುಂಡೇಶ್ವರಿಯ ತಂಗಿ ಜ್ವಾಲಾಮುಖಿ ತ್ರಿಪುರಸುಂದರಿ ಉತ್ತನಹಳ್ಳಿ ಮಾರಮ್ಮ ಎಂದೇ ಪ್ರಸಿದ್ಧಿ. ಪ್ರವಾಸಿಗರಿಗೆ ಪ್ರಮುಖ ಆಕರ್ಷಣೆಯಾಗಿರುವ ಚಾಮುಂಡಿ ಬೆಟ್ಟ ನಗರದ ಆಗ್ನೇಯ ದಿಕ್ಕಿನಲ್ಲಿ ಪೂರ್ವ–ಪಶ್ಚಿಮವಾಗಿ ಸಮುದ್ರ ಮಟ್ಟಕ್ಕಿಂತ ೩೪೮೮ ಅಡಿ ಎತ್ತರವಿದ್ದು, ಮೌನವಾಗಿ ಮೈಚಾಚಿಕೊಂಡು ಮೈಸೂರಿನ ಕಡೆಗೆ ಮುಖಮಾಡಿಕೊಂಡಿದೆ. ಪೂರ್ವದಲ್ಲಿ ಈ ಬೆಟ್ಟ ಅಗ್ನಿಪರ್ವತದ ಸೆಲೆಯಾಗಿತ್ತೆಂದೂ ಅದರ ಪ್ರತೀಕವಾಗಿ ಬೆಟ್ಟದ ತಪ್ಪಲಿನಲ್ಲಿರುವ ಉತ್ತನಹಳ್ಳಿಯ ಗ್ರಾಮದೇವತೆ ಮಾರಮ್ಮ ಜನತೆಗೆ ಅಗ್ನಿಪರ್ವತದ ಬಗೆಗಿದ್ದ ಭಯದಿಂದ ರೂಪುಗೊಂಡಳೆಂದು ಭೂಗರ್ಭ ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

"ಜೈನಧರ್ಮ ಪ್ರಬಲವಾಗಿದ್ದ ಕಾಲದಲ್ಲಿ ಜೈನ ಯಕ್ಷಿಯರಾಗಿದ್ದ ಬೆಟ್ಟದ ಮೇಲಿನ ಚಾಮುಂಡಿ ಹಾಗೂ ಉತ್ತನಹಳ್ಳಿಯಲ್ಲಿರುವ ಮಾರಮ್ಮ ಜೈನಧರ್ಮದ ಪ್ರಭಾವ ಕುಗ್ಗಿದ ಮೇಲೆ ಜನಪದ ದೇವತೆಯಾದರು. ಆ ಕಾಲಕ್ಕೆ ಈ ದೇವತೆಗಳ ಆರಾಧನೆಗೆ ತಮ್ಮಡಿಗಳೆಂಬ ಶೈವಸಂಪ್ರದಾಯದ ಬ್ರಾಹ್ಮಣೇತರ ಅರ್ಚಕರಿದ್ದರು." ಜನಪದರು ಸಹ ಮಡೆಹುಯ್ಯುವುದು, ಭಾನು ಕುಡಿಕೆ, ಬಾಯಿಬೀಗ ಧೂಪದ ಸೇವೆ, ಕನ್ಯಾಕನ್ನಡಿ ಮುಂತಾದ ಅರ್ಚನಾ ವಿಧಾನಗಳನ್ನು ಅನುಸರಿಸುತ್ತಿದ್ದರಲ್ಲದೇ ಪ್ರಾಣಿ ಬಲಿಯನ್ನು ಕೊಡುತ್ತಿದ್ದರು. ಕುರಿ, ಕೋಳಿ, ಕೋಣಗಳ ಬಲಿಯನ್ನಲ್ಲದೇ ದೇವಿಗೆ ನರಬಲಿಯನ್ನು ಕೊಡುತ್ತಿದ್ದ ಸಂಗತಿಯನ್ನು 'ಫ್ರೆಂಚ್ ಸುವಾರ್ತಾ ಪ್ರಸಾರಕ ಅಬೆದುಬಾಯ್' ತನ್ನ ಗ್ರಂಥದಲ್ಲಿ ದಾಖಲಿಸಿದ್ದಾನೆ.[೧] ಆದರೆ ಮೈಸೂರು ಸಂಸ್ಥಾನವನ್ನು

ಆಳಿದ ಹೈದರಾಲಿ ಕಡ್ಡಾಯವಾಗಿ ನರಬಲಿಯನ್ನು ಕೊನೆಗೊಳಿಸಿದನೆಂದು ತಿಳಿದು ಬರುತ್ತದೆ.

ಇಂದಿಗೂ ಪ್ರಾಣಿಬಲಿ ಪದ್ಧತಿಯು ಉತ್ತನಹಳ್ಳಿ, ಸಾಕಳ್ಳಿ, ಕೇತಮ್ಮನಹಳ್ಳಿ, ರಮ್ಮನಹಳ್ಳಿ, ಲಲಿತಾದ್ರಿಪುರ, ಈರನಗೆರೆ, ಕ್ಯಾತನಮಾರನಹಳ್ಳಿ, ಕನ್ನೆಗೌಡನಕೊಪ್ಪಲು ಮೊದಲಾದ ಸುತ್ತಮುತ್ತಲ ಹಳ್ಳಿಗಳಲ್ಲಿ ಉಳಿದು ಬಂದಿದೆ.

ಈ ದೇವತೆಯ ಅಕ್ಕ ತಂಗಿಯರು ಏಳು ಜನರಿದ್ದು, ಅವರೆಂದರೆ ಚಾಮುಂಡಿ, ಜ್ವಾಲಾಮುಖಿ, ಹೇಮಾಂಬೆ, ಹೊನ್ನಾದೇವಿ, ಚೌಡೇಶ್ವರಿ, ತಿಬ್ಬಾದೇವಿ ಮತ್ತು ಕಾಳಮ್ಮ, ಜ್ವಾಲಾಮುಖಿದೇವಿ ಉತ್ತನಹಳ್ಳಿಯಲ್ಲಿ ಬಂದು ನೆಲೆಸಲು ಚಾಮುಂಡೇಶ್ವರಿಯೇ ಕಾರಣ ಎಂಬುದಾಗಿ ಕಥೆಯಿದೆ. ಹಿಂದೆ, ಬಹಳ ಹಿಂದೆ, ಈಗಿನ ಮೈಸೂರು ನಗರ ಮಗ್ಗುಲಲ್ಲೆ ಮೈಚಾಚಿಕೊಂಡು ಮಲಗಿರುವ ಬೆಟ್ಟದ ಮೇಲೆ ಮಹಿಷನೆಂಬ ರಾಕ್ಷಸನು ವಾಸವಾಗಿದ್ದನು. ಅವನ ಆಡಳಿತಕ್ಕೆ ಒಳಪಟ್ಟ ರಾಜ್ಯ ಮಹಿಷ ಮಂಡಲವೆಂದು ವಿಖ್ಯಾತವಾಗಿತ್ತು ತನ್ನ ಸುಂದರವಾದ, ಸಂಪದ್ಭರಿತವಾದ ಸಾಮ್ರಾಜ್ಯಕ್ಕೆ ತಾನೇ ಶಾಶ್ವತವಾಗಿ ತಾನೇ ಸಾರ್ವಭೌಮನಾಗಿರ ಬೇಕೆಂದು ಯೋಚಿಸಿದ ಮಹಿಷನು ಅಮರತ್ವವನ್ನು ಪಡೆದುಕೊಳ್ಳಬಯಸಿದ. ಈತ ಬ್ರಹ್ಮನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದನಂತೆ. ಮಹಿಷನ ತಪಸ್ಸಿಗೆ ಮೆಚ್ಚಿ ಪ್ರಸನ್ನನಾದ ಬ್ರಹ್ಮನನ್ನು ಕುರಿತು ಮಹಿಷ ಈ ರೀತಿ ಕೇಳಿಕೊಂಡನಂತೆ.

"ನನ್ನನ್ನು ಯಾರಾದರು ಕೊಲ್ಲದಕ್ಕೆ ಬಂದ್ರೆ
ನನ್ನದ್ರೀಯದ ಒಂದು ತೊಟ್ಟು ರಕ್ತ
ನೆಲಕ್ಕೆ ಬಿದ್ದುದ್ದೇ ಆದರೆ
ಆತೊಟ್ಟು ರಗುತದಿಂದ
ಕೋಟಿ ಕೋಟಿ ರಾಕ್ಷಸರು
ನನ್ನಂಗೆ ಶಕ್ತರಾಗಿ
ಯುದ್ಧಕ್ಕೆ ನಿಲ್ಲಬೇಕು
ಇಂತಹ ವರಗಳ ತಾವು ಕೊಡಬೇಕು ಅಂದನಂತೆ"[೨] ದೇವರು 'ಅಸ್ತು' ಎಂದ.

ಈ ರೀತಿ ವರಪಡೆದ ರಾಕ್ಷಸ ದೇವಲೋಕಕ್ಕೆ ನುಗ್ಗಿ ದೇವತೆಗಳನ್ನೆಲ್ಲಾ ಅಟ್ಟಾಡಿಸಿಕೊಂಡು ಹೊಡೆದು ಚಲ್ಲಾಪಿಲ್ಲಿಯಾಗುವಂತೆ ಮಾಡಿದನು. ಇದರಿಂದ ನೊಂದ ದೇವತೆಗಳೆಲ್ಲರೂ ಹರಿಹರರನ್ನು ಬೇಡಿಕೊಂಡರು. ಆಗ ಬ್ರಹ್ಮನು ತಪಸ್ಸು ಮಾಡಿದ ಭಕ್ತರಿಗೆ ವರವನ್ನು ಕೊಡಲೇಬೇಕಾದ ಅನಿವಾರ್ಯತೆಯನ್ನು ತಿಳಿಸಿ ಅದರಲ್ಲೂ ಒಂದು ತಂತ್ರವಿದೆ ಎಂದು ಹೇಳಿ, ಸ್ತ್ರೀ ಯಿಂದ ಮರಣವಿರುವ ತಂತ್ರವನ್ನು ತಿಳಿಸಿದರಂತೆ.

ಸ್ತ್ರೀಯಿಂದ ಮರಣವಿರುವ ವಿಷಯವನ್ನು ತಿಳಿದ ದೇವಾಧಿದೇವತೆಗಳೆಲ್ಲ ಸೇರಿ ಒಂದು ಅಪೂರ್ವವಾದ ಹೆಣ್ಣೊಂದನ್ನು ಸೃಷ್ಟಿಸಿದರು. ಆ ಹೆಣ್ಣೇ ಚಾಮುಂಡಿ. ಈ ದೇವತೆಗೆ ದೇವತೆಗಳು ತಮ್ಮ ಸರ್ವ ಶಕ್ತಿಗಳನ್ನು ಧಾರೆ ಎರೆದರು. ದೇವತೆಗಳ ಮಹಾಸತ್ತ್ವವನ್ನು ಮೈಗೂಡಿಸಿಗೊಂಡು ಬೆಳೆದಳು. "ಒಮ್ಮೆ ಚಾಮುಂಡಿಯ ಸೌಂದರ್ಯವನ್ನು ಬಯಸಿದ ಮಹಿಷ ಮತ್ತು ಚಾಮುಂಡಿಗೂ ಯುದ್ಧ ನಡೆಯುತ್ತದೆ. ಯುದ್ಧ ನಡೆಯುವಾಗ ಆ ಮಹಿಷನ ಒಂದು ತೊಟ್ಟು ರಕ್ತ ನೆಲಕ್ಕೆ ಬಿದ್ದೊಡನೆ ಕೋಟಿ ಕೋಟಿ ರಾಕ್ಷಸರು ಉತ್ಪತ್ತಿಯಾಗುತ್ತಿದ್ದರು. ಅವರನ್ನೆಲ್ಲಾ ಕತ್ತರಿಸಿ ಕತ್ತರಿಸಿ ಎಸೆದಂತೆಲ್ಲಾ ಮತ್ತೆ ಮತ್ತೆ ರಕ್ಕಸರು ಹುಟ್ಟಿಕೊಳ್ಳುತ್ತಾರೆ. ಇಂತಹ ಸಮಯದಲ್ಲಿ ಮಾಯಾವಿಯಾದ ಮಹಿಷನನ್ನು ಸಂಹರಿಸುವುದು ತನಗೆ ಸಾಧ್ಯವಿಲ್ಲವೇನೋ ಎಂಬಂತೆ ಚಾಮುಂಡಿ ತನ್ನ ಹಣೆಯ ಬೆವರನ್ನು ಬಲಗೈತೋರುಬೆರಳಿನಲ್ಲಿ ನೆಲಕ್ಕೆ ಒಗೆದಳು. ಆಕಾಶದಲ್ಲಿ ನೋಡುತ್ತಿದ್ದ ಹರಿಹರರು ಬೆವರನ್ನು ದಿಟ್ಟಿಸಿದರಂತೆ. ಈ ಬೆವರಿನಿಂದ ಉತ್ಪತ್ತಿಯಾದ ಹೆಣ್ಣೇ ಉತ್ತನಹಳ್ಳಿ ಉರುಕಾತಿಮಾರಮ್ಮ."[7] ಅಕ್ಕಯ್ಯ ನಾನು ನಿನ್ನ ಬೆವರಿನಿಂದ ಉತ್ಪತ್ತಿಯಾದ ಉರಿಮಾರಿ. ನಾನು ನಿನಗೆ ತಂಗಿಯಾಗಬೇಕು. ಈ ರಾಕ್ಷಸನನ್ನು ಕೊಲ್ಲಲು ನೀನು ಪಡುತ್ತಿರುವ ಕಷ್ಟವನ್ನು ನೋಡಿ ನಿನಗೆ ಸಹಾಯ ಮಾಡುವುದಕ್ಕೆ ಬಂದೆ ಎಂದು ಹೇಳುತ್ತಾರೆ.

ಈ ರೀತಿ ಯುದ್ಧ ನಡೆಯುವ ಸಂದರ್ಭದಲ್ಲಿ ಜ್ವಾಲಾಮುಖಿ ತನ್ನ ಉದ್ದವಾದ ಮತ್ತು ಅಗಲವಾದ ನಾಲಗೆಯನ್ನು ಭೂಮಿಯ ಮೇಲೆಲ್ಲಾ ಹಾಸಿದಳು. ಈ ರಾಕ್ಷಸನ ಒಂದು ತೊಟ್ಟು ರಕ್ತವು ನೆಲದ ಮೇಲೆ ಬೀಳದಂತೆ ನೋಡಿಕೊಳ್ಳುತ್ತೇನೆ ಎಂದ ದೇವಿ.

"ನನ್ನ ನಾಲಿಗೆ ಮೇಲೆ ನಿಂತು
ಕಾಳಗಮಾಡಕ್ಕಯ್ಯ! ತಂದನ್ನ ತಾನಾನಾ!

ಎಂದು ಹೇಳಿದ ತಂಗಿಯ ಮಾತಿನಿಂದ ಉತ್ತೇಜಿತಳಾಗಿ ಕೊನೆಗೆ ಮಹಿಷನನ್ನು ಸಂಹಾರ ಮಾಡಿದ ಚಾಮುಂಡಿ ತಂಗಿ ನನ್ನ ಗೆಲುವಿಗೆ ನೀನು ತಾನೇ ಕಾರಣ, ನಿನ್ನ ನಾಲಿಗೆ ಭೂಮಿಯನ್ನೆಲ್ಲಾ ಹರಡಿಕೊಳ್ಳದಿದ್ದರೆ ಆ ರಾಕ್ಷಸನ ರಕ್ತ ನೆಲಕ್ಕೆ ಬೀಳದಂತೆ ತಡೆಯಲು ನನ್ನಿಂದ ಆಗುತ್ತಿರಲಿಲ್ಲ ಎಂದು ಹೇಳಿ, ತಂಗಿ ನೀನು ಈ ಬೆಟ್ಟದ ತಪ್ಪಲಿನಲ್ಲಿ ಕಾಣುತ್ತಿರುವ ಉತ್ತನಹಳ್ಳಿಯಲ್ಲಿ ನೆಲೆಗೊಂಡು "ಉತ್ತನಹಳ್ಳಿ ಉರಿಕಾತಿ" ಎಂಬ ಹೆಸರಿನಿಂದ ಪ್ರಖ್ಯಾತಳಾಗು. ನಿನಗೂ ಪ್ರತೀ ವರ್ಷ ತಪ್ಪದಂತೆ ಜಾತ್ರೆ, ಉತ್ಸವ ತೇರು, ಮಡೆ, ಬಾನ ಕುಡಿಕೆ ಈ ಎಲ್ಲಾದನ್ನು ಕಳಿಹಿಸುತ್ತೇನೆಂದು ಹೇಳಿದ್ದಾಳಂತೆ"[೪] ಅದರಂತೆ ಪ್ರತೀ ವರ್ಷವೂ ಫೆಬ್ರವರಿ ತಿಂಗಳಿನಂದು ಜಾತ್ರೆ ನಡೆಯುತ್ತದೆ. ಈ ಜಾತ್ರೆಯು ನಡೆಯುವ ಸಂದರ್ಭದಲ್ಲಿ ಅನೇಕ ಜನರು ಬಂದು ಈ ದೇವಿಯ ದರ್ಶನವನ್ನು ಮಾಡಿ ಪುನೀತರಾಗುತ್ತಾರೆ. ಮುಜರಾಯಿ ಇಲಾಖೆಯ ಸ್ವಾಮ್ಯಕ್ಕೊಳಪಟ್ಟ ದೇವಸ್ಥಾನಗಳಲ್ಲಿ ಇದು ಒಂದು. ಪೂರ್ವ ದಿಕ್ಕಿನಲ್ಲಿರುವ ಈ ದೇವಸ್ಥಾನ ಚಿಕ್ಕದಾದ ಗುಡ್ಡವೊಂದರ ಮೇಲಿದೆ. ದೇವಸ್ಥಾನದ ಸುತ್ತಲೂ ಎತ್ತರವಾದ ಗೋಡೆ ಇದೆ. ಪ್ರದಕ್ಷಿಣೆಯನ್ನು ಮಾಡಲು ಸುತ್ತಲೂ ಜಾಗವಿದೆ. ಸುಮಾರು ನಾಲ್ಕು ಅಡಿ ಎತ್ತರವಿರುವ ಸುಂದರವಾದ ವಿಗ್ರಹವಿದೆ. ಅದನ್ನು ಪ್ರತಿದಿನ ಚಿನ್ನದ ಆಭರಣ ಮತ್ತು ಹೂವಿನಿಂದ ಅಲಂಕಾರ ಮಾಡಿ ನಿತ್ಯವು ಪೂಜೆ ಮಾಡುತ್ತಾರೆ. ವಿಶೇಷವಾಗಿ ಭಾನುವಾರ, ಮಂಗಳವಾರ ಅಥವಾ ಶುಕ್ರವಾರದಂದು ತುಂಬಾ ಜನರು ಬಂದು ದೇವಿಯ ದರ್ಶನ ಪಡೆಯುತ್ತಾರೆ. ಈ ದಿನಗಳಲ್ಲಿ ಗರ್ಭಗುಡಿಯ ಹತ್ತಿರ ಬಿಡುವುದಿಲ್ಲ. ದೂರದಿಂದಲೇ ದರ್ಶನ ಮಾಡಬೇಕು. ಉಳಿದ ಎಲ್ಲಾ ದಿನಗಳಲ್ಲಿ ಗರ್ಭಗುಡಿ ಹತ್ತಿರ ಭಕ್ತರನ್ನು ಪೂಜೆ ಮಾಡಿಸಲು ಮತ್ತು ದರ್ಶನ ಪಡೆಯಲು ಒಳಗೆ ಬಿಡುತ್ತಾರೆ. ಈ ದೇವಸ್ಥಾನದಲ್ಲಿ ಕಾವಲು ಕಾಯಲು ಹತ್ತು ಜನರನ್ನು ಉತ್ತನಹಳ್ಳಿಯವರನ್ನೇ ಇಲಾಖೆ ನೇಮಿಸಿಕೊಂಡಿದೆ. ದೇವಿಯನ್ನು ಪೂಜಿಸಲು ಉತ್ತನಹಳ್ಳಿಯ ಲಿಂಗಾಯಿತರ ಜನಾಂಗಕ್ಕೆ ವಾಂಶಿಕವಾಗಿ ಕೆಲವೊಂದು ಕುಟುಂಬಗಳ ಸದಸ್ಯರನ್ನು ನೇಮಿಸಲಾಗಿದೆ. ಈ ದೇವಸ್ಥಾನದ ವ್ಯಾಪ್ತಿಯಲ್ಲಿ ಹಣ್ಣುಕಾಯಿ ಅಂಗಡಿ ಮತ್ತು ಚಪ್ಪಲಿ ಕಾಯುವ ಅಂಗಡಿಯನ್ನು ಟೆಂಡರ್ ಮೂಲಕ ಕೊಡಲಾಗಿದೆ.

ಮೊದಲು ಈ ದೇವಸ್ಥಾನದ ನೆಲ ಸುಣ್ಣದ ತಿಳಿ ಮತ್ತು ಇಟ್ಟಿಗೆ ಚೂರುಗಳಿಂದ ನಿರ್ಮಿಸಲಾಗಿತ್ತು. ಆದರೆ ಇತ್ತೀಚಿಗೆ ದಿನಗಳಲ್ಲಿ ಅದನ್ನು ತೆಗೆಸಿ ಟೈಲ್ಸ್ ಕಲ್ಲುಗಳನ್ನು ದೇವಸ್ಥಾನದ ವರಾಂಡ ಮತ್ತು ಒಳಭಾಗದಲ್ಲಿ ಭಕ್ತರೇ ಹಾಕಿಸಿದ್ದಾರೆ. ಇದು ಮುಜರಾಯಿ ಇಲಾಖೆಯ ಸ್ವಾಮ್ಯಕ್ಕೊಳಪಟ್ಟಿದ್ದರೂ ದೇವಸ್ಥಾನದ ಅನೇಕ

ಬದಲಾವಣೆಯ ಕೆಲಸಗಳು ಭಕ್ತರಿಂದಲೇ ಆಗುತ್ತಿರುವುದರಿಂದ ಈ ದೇವಿಯ ಭಕ್ತರ ಕಷ್ಟ ಕಾರ್ಪಣ್ಯಗಳನ್ನು ನಿವಾರಿಸುತ್ತಾಳೆಂದು ಅಲ್ಲಿನ ಜನರು ನಂಬಿದ್ದಾರೆ.

ಚಾಮುಂಡೇಶ್ವರಿಯು ಮಹಿಷಾಸುರನನ್ನು ಸಂಹಾರ ಮಾಡಿದ್ದು ೯ನೇ ಶತಮಾನದಲ್ಲಿ ಎಂಬ ಪ್ರತೀತಿ ಇದೆ. ಆದ್ದರಿಂದ ಈ ದೇವತೆಯು ಉತ್ತನಹಳ್ಳಿಯಲ್ಲಿ ನೆಲೆಗೊಂಡ ನಂತರ ಅಂದರೆ ಸುಮಾರು ಹತ್ತನೇ ಶತಮಾನದಲ್ಲಿ ಮೈಸೂರಿನ ರಾಜಮನೆತನದವರಿಂದ ಈ ದೇವಸ್ಥಾನ ನಿರ್ಮಾಣಗೊಂಡಿತ್ತೆಂದು ಗ್ರಾಮಸ್ಥರು ಹೇಳುತ್ತಾರೆ. ಅಲ್ಲಿನ ಜನರು ಸುಮಾರು ೨೦ ಅಡಿ ಎತ್ತರದ ಗೋಪುರವಿದ್ದು ಅದನ್ನು ಮುಂದಿನ ದಿನಗಳಲ್ಲಿ ಇನ್ನೂ ಎತ್ತರವಾಗಿಸುವ ಯೋಜನೆ ಇದೆ. ಈ ದೇವಸ್ಥಾನಕ್ಕೆ ಹರಕೆ ಹೊತ್ತ ಕೆಲವು ಭಕ್ತರು ಕುರಿ, ಕೋಳಿಗಳನ್ನು ಬಲಿ ಕೊಡುತ್ತಾರೆ. ಹೀಗೆ ಬಲಿಕೊಟ್ಟ ಕೆಲವು ಜನರು ಅಲ್ಲೇ ಅದನ್ನು ಅಡುಗೆ ಮಾಡಿ ಊಟ ಮಾಡಿಕೊಂಡು ಹೋಗುತ್ತಾರೆ. ಅಲ್ಲದೇ ಕೆಲವು ರಾಜಕಾರಣಿಗಳು ತಾವು ಗೆದ್ದ ಸಂತೋಷಕ್ಕಾಗಿ ದೇವಸ್ಥಾನದ ವ್ಯಾಪ್ತಿಯಲ್ಲಿರುವ 'ಜವನಕಟ್ಟೆ' ಎಂಬ ಮನೆಯಲ್ಲಿ ಭೋಜನಕೂಟ ಏರ್ಪಡಿಸುತ್ತಾರೆ. ಇದು ವಾರದಲ್ಲಿ ಒಂದು ದಿನ ತಪ್ಪದೇ ನಡೆಯುತ್ತದೆ.

**ಹೂ ಬಿದ್ರೆ ಹರಕೆ ಪಾಸು**

ಶ್ರೀ ಜ್ವಾಲಾಮುಖಿ ತ್ರಿಪುರಸುಂದರಿ ದೇವಸ್ಥಾನದ ಮತ್ತೊಂದು ವಿಶೇಷವೆಂದರೆ, ಹೂವು ಕೇಳುವುದು. ಅಂದರೆ, ದೇವಿಯ ಮೂರ್ತಿಯ ತಲೆಯ ಮೇಲೆ ಹೂ ಇರಿಸಲಾಗುವುದು. ಭಕ್ತರು ತಮ್ಮ ಬೇಡಿಕೆ ಸಲ್ಲಿಸಿ ಒಂದೆರಡು ನಿಮಿಷ ಧ್ಯಾನ ಸ್ಥಿತಿಯಲ್ಲಿ ನಿಲ್ಲುವುದು. ಹೂ ಬಲಗಡೆಗೆ ಬಿದ್ದರೆ ನಮ್ಮ ಕೆಲಸ ಆಗುತ್ತದೆ ಎಂದರ್ಥ. ಇಲ್ಲದಿದ್ದರೆ ಅದಕ್ಕೆ ಸವಲ್ಪ ತೊಡಕಿದೆ ಅಥವಾ ಕಾಯಬೇಕು ಎಂದರ್ಥ. ಹೂ ಬೀಳದಿದ್ದರೆ ಹರಕೆ ಈಡೇರುವುದಿಲ್ಲ ಎಂತಲೂ ಪ್ರತೀತಿ ಇದೆ. ಈ ನಂಬಿಕೆಯನ್ನು ಹಲವಾರು ಮಂದಿ ಈಗಲೂ ಹೊಂದಿದ್ದಾರೆ. ಬರುತ್ತಾರೆ ಹೂ ಕೇಳುತ್ತಾರೆ ಅವರವರ ಭಕುತಿಗೆ ಅವರವರ ನಂಬಿಕೆಗೆ ತಕ್ಕಂತೆ ಇದರಿಂದಾಗಿ ಹೂವಿನ ಹರಕೆಯ ಖ್ಯಾತಿಯೂ ಈ ಊರಿನದ್ದೂ.

## ಉತ್ತನಹಳ್ಳಿ ಮಾರಮ್ಮನನ್ನು ಕುರಿತಾದ ಮೌಖಿಕ ಸಾಹಿತ್ಯ

ಮಾರಮ್ಮನನ್ನು ಕುರಿತ ಮಟ್ಟುಗಳನ್ನು ಕೇಳಿದಾಗ ಮಾರಮ್ಮನ ಭಯಾನಕ ಸ್ಥಿತಿ, ರೌದ್ರಾವತಾರ, ಶಾಂತ ಸ್ವರೂಪ ಮಾರಮ್ಮನ ಉತ್ಸವ, ಮಾರಮ್ಮನ ರೂಪ ವಿಗ್ರಹ ಪ್ರತಿಯೊಂದನ್ನು ವರ್ಣಿಸುವ ಮೂಲಕ ಅವಳ ಬಗ್ಗೆ ಹಿರಿಯರು ಹಾಡುಗಳನ್ನು

ಕಟ್ಟಿರುವುದನ್ನು ಇಂದಿಗೂ ನಮ್ಮ ಜನಪದರು ಹಾಡುವುದನ್ನು ಕಾಣಬಹುದು. ವಿವಿಧ ಕ್ರಿಯಾ ವಿಧಿಗಳಿಗೆ ಬೇರೆ ಬೇರೆ ಗೀತೆಗಳನ್ನಾಡುತ್ತಾರೆ. ಅದರಲ್ಲೆ ಭಕ್ತಿ ಪರವಶವಾಗುವುದರ ಮೂಲಕ ತಮ್ಮನ್ನು ತಾವು ಮೈಮರೆತು ಹಾಡುತ್ತಾರೆ. ಹಾಗೆಯೇ ಚಾಮುಂಡೇಶ್ವರಿ ಸಂಸಾರದ ಒಂದು ಚಿತ್ರಣ, ಜ್ವಾಲಾಮುಖಿಯ ಸಹೋದರಿ ಎಂದು ಒಂದು ಗೀತೆ ಈ ರೀತಿ ತಿಳಿಸುತ್ತದೆ.

ಮಾತು – ಕೇಳು ಕೇಳು ನನ್ನ ತಂಗಿ ಉತ್ನಳ್ಳಿ ಮಾರವ್ವ
ನಿನ್ನ ಭಾವನಾದ ನಂಜುಂಡೇಶ್ವರ ಹೋಗಿ
ಆರು, ಮೂರು ಒಂಭತ್ತು ತಿಂಗಳಾಯ್ತಲ್ಲ
ಅವನೋದಾಗ್ಲಿಂದ ನನ್ನ ಹೊಟ್ಟೆಗೆ ಅನ್ನ ನೀರು
ಸೇರಿತಿಲ್ಲ. ಕಣ್ಣಿಗೆ ನಿದ್ದೆ ಬರುತ್ತಿಲ್ಲ
ಅವನೆತ್ತಿ ಮ್ಯಾಲೆ ನೆರೆ ಬಂದಿರೊ ಮುದಿ ನನ್ನ
ಸಾಂವ್ತಿ ಮಗ ಹೋಗ್ ಕುಂತವ್ನಲ್ಲ
ಅವನಿಗೆ ಹಾವಾದ್ರು ಕಚ್ಚಬಾರ್ದ, ಚೇಳಾದ್ರು
ಚುಚ್ಚ ಬಾರ್ದ ನಾಗರ ಜ್ವರ ಬಂದು
ನರಳಾಡಿ ಸಾಯಬಾರ್ದ! ಸುಳ್ಳ ಅವ್ನ
ಆಯ್ಸ ತೊಡೆಯ ಬರಲಿಲ್ಲ ತಂಗ್ಯವ್ವ
ತಂದನ್ನ ತನಾನ । ತಂದನ್ನ ತನಾನ । ತಂದನಾ
ತಾನಾನ । ತಂದನಾನ ತನಾನ..................

**ಮಾರವ್ವನನ್ನು ಕುರಿತಾಗಿ**

ಮಾತು – ಏಕೆ ಮಾರವ್ವ ಮುಖವೆಲ್ಲ ಸಪ್ಪಗೆ
ನಿನ್ನ ನೋಡಿದೊರೆಲ್ಲ ನಗುತ್ತಾರೆ
ನಿನ್ನ ಕಾಲಿಗೆ ಬಿದ್ದೇವು ಕಲಿಯಾಗು......

ಹಾಡು – ಎಲ್ಲು ಕಾಣ್ ಎಲ್ಲು ಕಾಣೆ
ಮಾರವ್ವನಂತೆವ್ವ್
ಎಲ್ಲು ಕಾಣ್ ಎಲ್ಲು ಕಾಣೆ
ಮಾರವ್ವ ಹೊರಟವಳೆ ಮಳವಳ್ಳಿ
ಬೀದೀಲಿ ಮಳೆ ಬಂದದಲ್ಲಿ
ತಂಗ್ಯಾಳೆ ಮಳೆಬಂದರಲ್ಲಿ ತಂಗ್ಯಾಳೆ ಮಾರವ್ವ
ಎಲ್ಲು ಕಾಣ್ ಕಾಣೆ ಮಾರವ್ವನಂತೆವ್ವ್
ಎಲ್ಲು ಕಾಣ್ ಎಲ್ಲು ಕಾಣೆ.......

ಜಾತ್ರೆಯ ಮೆರವಣಿಗೆಯಲ್ಲಿ

ಗಲ್ಲು ಗಲ್ಲೆನುತಾಳೆ ಮಾರವ್ವ
ಗಲ್ಲು ಗಲ್ಲೆನುತಾ
ನಿಲ್ಲೆಂದರ್ಹೋಗುತ್ತಾಳೆ
ಹೊಂಬಾಳೆಗೆ ವಾಲುತ್ತಾಳೆ
ಚಿನ್ನದಾಗೇ ತೂಗುತ್ತಾಳೆ
ಹೊಂಬಾಳೆ ಹೊಳೆವ ನೋಡು

ಮೈಸೂರ ಉತ್ತನಹಳ್ಳಿಯ ದೇವಿಯೆ
ಶಿರಬಾಗಿ ಬಂದೆ ನಿನ್ನ ಬಳಿಗೆ
ಓ ತಾಯಿ..........
ಮಹಾಲಕ್ಷ್ಮಿ ಮಹಾತಾಯಿ ಮಹಾಮಾತೆಯೆ
ಚಾಮುಂಡಿ ಸಹೋದರಿಯ ಜ್ವಾಲಾಮುಖಿಯೆ........

ಆರತಿ ಉತ್ನಳಮ್ಮನ್ಗೆ........
ಆರತಿ ಬೆಟ್ಟದ ಅಮನ್ಗೆ
ಬೆಳಗೋಣ ನೀವು ಬನ್ನಿ
ನೀವೆಲ್ಲ ಕೂಡಿ ಬನ್ನಿ ಬನಿರೇ ............ ಬನಿರೇ .......... ಆರತಿ
ಬೆಳಗೋಣ ॥ ಆರತಿ ಉತ್ನಳಮ್ಮನ್ಗೆ ॥

೨೦೦೪ರಲ್ಲಿ ಹಿಮಾಲಯದ ಶ್ರೀ ಸ್ವಾಮಿ ಜ್ಞಾನಾನಂದ ಸ್ವಾಮಿಜಿ ಭೇಟಿನೀಡಿ ದೇವಿಯನ್ನು ಕುರಿತು ಈ ರೀತಿ ಹೇಳಿದ್ದಾರೆ. 'ಶ್ರೀ ಉತ್ತನಹಳ್ಳಿ ಜ್ವಾಲಾಮುಖಿ ಯಾರು

ಮನಕಂಡಿದ್ದನ್ನು ಮನವರಿತಂತೆ ಅತಿಸೂಕ್ಷ್ಮದಲ್ಲಿ ಬರೆಯುವೆ. ನಂಬುವವರು ನಂಬಿ. ಬಿಟ್ಟವರು ಬಿಡಿ. ಸಂಶಯಾತ್ಮಕರಿಗೆ ಸಂಶಯಳು. ಆಸ್ತಿಕರಿಗೆ ಆಸ್ತಿಕಳೂ, ನಾಸ್ತಿಕ ರಕ್ಕಸರಿಗೆ ಮೃತ್ಯು ರೂಪಳೂ, ಸರ್ವಜ್ಞಳೂ, ಸರ್ವಮಂಗಳಳೂ, ಸರ್ವಪ್ರಿಯಳೂ, ಸರ್ವಸ್ವತಂತ್ರಳೂ, ಸರ್ವದುಃಖಹರಳೂ, ಸರ್ವಸುಖಪ್ರದಾಯಕಳೂ ಸರ್ವಐಶ್ವರ್ಯ ಪ್ರದಾಯಕಳೂ, ಸರ್ವದೇವತೆಗಳೂ ಯಾರನ್ನು ಸ್ತುತಿಸಿ ನಮಿಸುತ್ತರೆಯೋ ಆ ತಾಯಿಯೇ ಉತ್ತನಹಳ್ಳಿಯ ಜ್ವಾಲಾಮುಖಿ ದೇವಿ. ಬ್ರಹ್ಮನಂದಳೂ ಬ್ರಹ್ಮವಾಹಿನಿಯೂ ಬ್ರಹ್ಮಚಾರಿಣಿಯೂ, ಬ್ರಾಹ್ಮಿರೂಪಳೂ, ಬ್ರಾಹ್ಮಿ ಮಹೇಶ್ವರಿಯೂ ವಿಂಧ್ಯಾಚರ ನಿವಾಸಿಯೂ, ಕೈಲಾಸಚಲವಾಸಿನಿಯೂ, ಚಂದನಾರಣ್ಯವಾಸಿನಿಯೂ, ಮಲಯಚಲವಾಸಿನಿಯೂ, ವಟವೃಕ್ಷವಾಸಿನಿಯೂ ಉತ್ತನಹಳ್ಳಿ ಜ್ವಾಲಾಮುಖಿದೇವಿ. ಭಕ್ತನಂದಳು, ಜ್ಞಾನಾನಂದಳೂ, ಸದಾನಂದಳೂ, ಓಂಕಾರಳೂ ಕ್ಲಿ ರೂಪಿಣಿಯೂ, ಕ್ರೀಂನಾಮಧಾರಿಣಿಯೂ, ಹ್ರೀಂಕಾರಪ್ರಿಯಳು ಉತ್ತನಹಳ್ಳಿ ಜ್ವಾಲಾಮುಖಿದೇವಿ.

ಉಗ್ರಳು, ಸುಂದರಳೂ, ಶಾಂತಳೂ, ಚತುರ್ವೇದಳೂ, ಚರ್ತುಮುಖಿಯೂ, ಚತುರ್ವಿಧ ಫಲಪ್ರದಾಯಕಳೂ, ರಕ್ತಬೀಜಾಸುರ ವಿನಾಶಿಯೂ, ಶುಂಭಾಸುರ ವಿನಾಶಿಯೂ ಚಾಮುಂಡಾದೇವಿಯ ಸಹೋದರಿಯೂ ಉತ್ತನಹಳ್ಳಿ ಜ್ವಾಲಾಮುಖಿ.

ಒಟ್ಟಿನಲ್ಲಿ ಈ ದೇವತೆಯು ಭಕ್ತರ ಕಷ್ಟಗಳನ್ನು ನಿವಾರಿಸುತ್ತಾಳೆಂದು ನಂಬಿಕೆ. ಅದಕ್ಕೆ ಸಾಕ್ಷಿಯಾಗಿ ಕೆಲವು ಭಕ್ತರು ಲಕ್ಷಗಟ್ಟಲೇ ಹಣವನ್ನು ಖರ್ಚುಮಾಡಿ ದೇವಸ್ಥಾನದಲ್ಲಿ ಕೆಲವೊಂದು ಸೇವಾರ್ಥ ಕೆಲಸಮಾಡಿಸುತ್ತಿರುವುದು ಸಾಕ್ಷಿಯಾಗಿದೆ. ಹಾಗೆಯೇ ಸುತ್ತಮುತ್ತಲ ಹಳ್ಳಿಗಳಿಂದಲೂ ಸಾವಿರಾರು ಜನರು ದೇವಿದರ್ಶನ ಮಾಡಿಕೊಂಡು ಹರಕೆ ರೂಪದಲ್ಲಿ ಕಾಣಿಕೆಯನ್ನು ನೀಡುತ್ತಾರೆ.

**ಆ) ಕಾರ್ಗಳಮ್ಮನ ದೇವಸ್ಥಾನ:** ಭಾರತ ದೇಶದ ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲಿಯೂ ದೇವರನ್ನು ಹಲವು ರೀತಿಯಲ್ಲಿ ಪೂಜಿಸುತ್ತಾರೆ. ಗ್ರಾಮದೇವತೆ ಇರದ ಯಾವುದೇ ಹಳ್ಳಿ ಇಲ್ಲವೆಂದು ಹೇಳಬಹುದು. ಅದರಂತೆ ಉತ್ತನಹಳ್ಳಿ ವ್ಯಾಪ್ತಿಯಲ್ಲಿ ಕಾರ್ಗಳಮ್ಮ ಎಂಬ ಗ್ರಾಮದೇವತೆಯ ದೇವಸ್ಥಾನವಿದೆ. ಈ ದೇವಸ್ಥಾನವನ್ನು ಚೋಳರು ಕಟ್ಟಿಸಿದರೆಂದು ಅಲ್ಲಿನ ಜನರ ನಂಬಿಕೆ. ಇದಕ್ಕೆ ಲಿಖಿತ ಅಥವಾ ಶಾಸನಗಳ ಆಧಾರವಿಲ್ಲ. ಪೂರ್ವಕ್ಕೆ ಮುಖ ಮಾಡಿಕೊಂಡಿರುವ ದೇವಸ್ಥಾನದ ಗರ್ಭಗುಡಿಯಲ್ಲಿ ಸುಮಾರು ಎರಡು ಅಡಿ ಎತ್ತರವಾದ ಸುಂದರ ವಿಗ್ರಹವಿದೆ. ಗರ್ಭಗುಡಿಯ ಅಕ್ಕಪಕ್ಕದಲ್ಲಿ ದ್ವಾರಪಾಲಕ ವಿಗ್ರಹಗಳಿವೆ. ಈ ದೇವರನ್ನು ಅನೇಕ ತಲೆಮಾರುಗಳಿಂದ

ಪೂಜೆ ಮಾಡಿಕೊಂಡು ಬಂದಿರುವ ಮನೆತನದವರೇ ಈಗಲೂ ಅಲ್ಲಿ ಪೂಜೆಯನ್ನು ಮಾಡುತ್ತಾರೆ. ಇಲ್ಲಿ ಪ್ರತಿ ಮಂಗಳವಾರ ಪೂಜೆ ನಡೆಯುತ್ತದೆ. ಜೊತೆಗೆ ಪ್ರತಿನಿತ್ಯ ಸಾಯಂಕಾಲ ಪೂಜಾರಿ ದೀಪ ಹಚ್ಚಿ ಬರುತ್ತಾರೆ.

ಪ್ರಾರಂಭದಲ್ಲಿ ಈ ದೇವತೆಗೆ ನರಬಲಿಯನ್ನು ಕೊಡುತ್ತಿದ್ದರು ಎಂಬುದಕ್ಕೆ ಆಧಾರವಾಗಿ ಒಮ್ಮೆ ಕಾರುಗಳ್ಳಿಯ ಮಾರನಾಯಕನ ಮಂತ್ರಿಯ ಮಗ ಮತ್ತು ಸೇನಾಪತಿ ಬೇಟೆಯಾಡಲು ಈ ಊರಿಗೆ ಬಂದರಂತೆ ಹೀಗೆ ಬಂದ ಮಂತ್ರಿಯ ಮಗ ಮತ್ತು ಸೇನಾಪತಿಯನ್ನು ದೇವಸ್ಥಾನದ ಮುಂಭಾಗದಲ್ಲಿ ಅವರ ತಲೆಯನ್ನು ಕತ್ತರಿಸಿ ಕುಕ್ಕೆಯಿಂದ ಮುಚ್ಚಿದರಂತೆ. ಕಾಡಿಗೆ ಹೋದ ಮಕ್ಕಳು ಹಿಂದುರುಗಿ ಬರಲಿಲ್ಲವೆಂದು ತಿಳಿದ ರಾಜ ಪರಿವಾರದವರು ಅವರನ್ನು ಹುಡುಕಿಕೊಂಡು ಈ ದೇವಸ್ಥಾನಕ್ಕೆ ಬಂದು ಕುಕ್ಕೆಯಲ್ಲಿ ಏನಿದೆ ಎಂದು ಊರಿನವರನ್ನು ಪ್ರಶ್ನಿಸಿದಾಗ ಅಲ್ಲಿನ ಜನರು ಈ ದೇವತೆಯನ್ನು ಪ್ರಾರ್ಥಿಸಿ ನಿನ್ನ ಸತ್ಯದಿಂದ ನಮ್ಮಗಳ ಜೀವವನ್ನು ಉಳಿಸು ಎಂದು ಭಯದಿಂದ ಕೇಳಿಕೊಂಡರಂತೆ. ಆಗ ಕುಕ್ಕೆಯನ್ನು ತೆಗೆದು ನೋಡಿದಾಗ ಅಲ್ಲಿದ್ದ ಮಂತ್ರಿ ಮಗನ ತಲೆ ಮತ್ತು ಸೇನಾಪತಿಯ ತಲೆ ಟಗರಿನ ತಲೆಯಾಗಿದ್ದವು ಎಂದು ಹಿರಿಯರು ಹೇಳುತ್ತಾರೆ. ಇತ್ತೀಚಿನವರೆಗೂ ಆ ಟಗರಿನ ತಲೆಗಳು ಇದ್ದವಂತೆ ಒಮ್ಮೆ ದೇವಸ್ಥಾನದಲ್ಲಿ ಕಳ್ಳತನವಾಗಿ ಎಲ್ಲವನ್ನು ದೋಚಿಕೊಂಡು ಹೋದರಂತೆ. ಈ ದೇವರಿಗೆ ಸಂಬಂಧಪಟ್ಟ ಜನರು ಅನೇಕ ಹಳ್ಳಿಗಳಿಂದ ದೀಪಾವಳಿ ಮತ್ತು ಯುಗಾದಿ ಹಬ್ಬದಂದು ಉತ್ಸವ ನಡೆಯುವ ಸಂದರ್ಭದಲ್ಲಿ ಬಂದು ಪೂಜೆ ಮಾಡಿಕೊಂಡು ಹೋಗುತ್ತಾರೆ. ಈ ದೇವರಿಗೆ ಸಂಬಂಧಪಟ್ಟ ಕುರುಬರು ಅದರಲ್ಲೂ ಕುಂಬಳಕುಲ ಎಂಬ ಕುಲಕ್ಕೆ ಸೇರಿದ ಜನರ ಮನೆದೇವತೆ ಈಕೆ. ಈ ದೇವರಿಗೆ ಸಂಬಂಧಿಸಿದ ಜನರು ಮದುವೆ ಮಾಡಿಕೊಂಡ ನಂತರದಲ್ಲಿ ತಾಳಿಯನ್ನು ತಂದು ಹರಕೆಯಾಗಿ ಒಪ್ಪಿಸುತ್ತಾರೆ. ಜೊತೆಗೆ ಮಕ್ಕಳಾದರೆ ಇಲ್ಲಿಯೇ ನಾಮಕರಣ ಮಾಡಿಸುತ್ತಾರೆ. ಈ ದೇವರ ಚಿನ್ನದ ವಿಗ್ರಹ ಸುಮಾರು ಒಂದು ಅಡಿ ಎತ್ತರವಿದ್ದು ಇದನ್ನು ದೀಪಾವಳಿ ಮತ್ತು ಯುಗಾದಿ ಹಬ್ಬದಂದು ಮೆರವಣಿಗೆಯನ್ನು ಮಾಡುತ್ತಾರೆ. ಮೊದಲು ಇದನ್ನು 'ವಾನ' ಕಟ್ಟುವುದು ಎನ್ನುತ್ತಿದ್ದರು. ನಾಲ್ಕು ವರ್ಷಗಳ ಹಿಂದೆ ಯುಗಾದಿಯ ಹಬ್ಬದಂದು ವಾನ ಕಟ್ಟಿ ಈ ದೇವಿಯ ಮೆರವಣಿಗೆಯನ್ನು ಮಾಡುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ರಥದ ಮೇಲೆ ಮೆರವಣಿಗೆ ಮಾಡುತ್ತಾರೆ.

ಈ ದೇವಸ್ಥಾನವನ್ನು ಚೋಳರು ಕಟ್ಟಿಸಿದ್ದರೆಂದು ಅಲ್ಲಿಯ ಜನರ ನಂಬಿಕೆ. ಆದರೆ ಇತ್ತೀಚಿನ ದಿನಗಳಲ್ಲಿ ಅದನ್ನು ಹೊಡೆದುಹಾಕಿ ಲಕ್ಷಾಂತರ ರೂಪಾಯಿ ಖರ್ಚು

ಮಾಡಿ ಅದರ ಜೀರ್ಣೋದ್ಧಾರ ಕಾರ್ಯವನ್ನು ಮಾಡಿದ್ದಾರೆ. ಇದಕ್ಕೆ ಈ ದೇವಿಯ ಕುಲದವರೆಲ್ಲ ಧನಸಹಾಯ ಮಾಡಿದ್ದಾರೆ.

ಇ) ಮಾರಮ್ಮನ ದೇವಸ್ಥಾನ: ಭಾರತದ ಪ್ರತಿಯೊಂದು ಹಳ್ಳಿಯಲ್ಲಿಯೂ ಮಾರಮ್ಮನ ದೇವಸ್ಥಾನ ಸಾಮಾನ್ಯವಾಗಿ ಇದ್ದೇ ಇರುತ್ತದೆ. ಅಂತೆಯೇ ಉತ್ತನಹಳ್ಳಿಯಲ್ಲೂ ಮಾರಮ್ಮನ ದೇವಸ್ಥಾನವಿದೆ. ಇದು ಮೊದಲು ಚಿಕ್ಕದಾಗಿದ್ದು ನಂತರ ದಿನಗಳಲ್ಲಿ ಅದನ್ನು ದೊಡ್ಡದಾಗಿ ಕಟ್ಟಿಸಿದ್ದಾರೆ. ಈ ದೇವಸ್ಥಾನದ ಮುಂಭಾಗದಲ್ಲಿ ಉದ್ದವಾದ ಒಂದು ಕಲ್ಲಿನ ವಿಗ್ರಹವಿದೆ. ಈ ವಿಗ್ರಹಕ್ಕೆ ಎಳನೀರು ಮತ್ತು ಬೇವಿನಸೊಪ್ಪಿನಿಂದ ಪೂಜೆ ಮಾಡುತ್ತಾರೆ. ಈ ದೇವಿಯನ್ನು ಮಕ್ಕಳ ದೇವತೆಯೆಂದು ಕರೆಯುತ್ತಾರೆ. ಮಕ್ಕಳಿಗೆ ಸಿಡುಬಾದರೆ ಮೊದಲು ಈ ದೇವಿಗೆ ಪೂಜೆ ಮಾಡಿಸುತ್ತಾರೆ. ಈ ದೇವಿ ರೋಗವನ್ನು ಹರಡುತ್ತಾಳೆಂದು ಜನರು ಭಯಭಕ್ತಿಯಿಂದ ಪೂಜಿಸುತ್ತಾರೆ. ವರ್ಷಕ್ಕೆ ಒಂದು ದಿನ ಮಾರಮ್ಮನ ಹಬ್ಬವೆಂದು ಆಚರಿಸಿ ಆ ದಿನ ಮಡೆ ಹುಯ್ಯುವುದನ್ನು ನೋಡಬಹುದು. ಈ ದೇವಿಗೆ ಅದೇ ದಿನ ಬಲಿಯನ್ನು ಕೊಡುತ್ತಾರೆ.

ಶನಿದೇವರ ದೇವಸ್ಥಾನ ಇತ್ತೀಚಿನ ವರ್ಷಗಳಲ್ಲಿ ನಿರ್ಮಾಣವಾಗಿದ್ದು, ಇಲ್ಲಿ ಪ್ರತಿ ಶನಿವಾರ ಮತ್ತು ಬುಧವಾರ ವಿಶೇಷವಾಗಿ ಪೂಜೆ ನಡೆಯುತ್ತದೆ. ಇಲ್ಲಿ ಪೂಜೆ ಮಾಡುವವನಿಗೆ ದೇವರು ಬರುತ್ತದೆ. ವಾರದ ಎಲ್ಲಾ ದಿನಗಳಲ್ಲೂ ಭಕ್ತರು ಬಂದು ದೇವರ ದರ್ಶನ ಮಾಡಿಕೊಂಡು ವಕ್ಕಣೆಯನ್ನು ಕೇಳಿಕೊಂಡು ತಮ್ಮ ಕಷ್ಟಗಳನ್ನು ನಿವಾರಿಸಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ದೇವರ ಹೆಸರಿನಲ್ಲಿ ಹಣ ಸುಲಿಗೆ, ಅತ್ಯಾಚಾರ ಮುಂತಾದವುಗಳು ನಡೆಯುತ್ತಿರುವುದನ್ನು ಕಾಣಬಹುದಾಗಿದೆ. ಜ್ವಾಲಾಮುಖಿ ದೇವಸ್ಥಾನಕ್ಕೆ ಹೊಂದಿಕೊಂಡಂತೆ ಪೂರ್ವಕ್ಕೆ ಮುಖಮಾಡಿ ಕೊಂಡಿರುವ ಈಶ್ವರನ ದೇವಸ್ಥಾನವಿದೆ.

ಗರ್ಭಗುಡಿಯ ಒಳಭಾಗದಲ್ಲಿ ಲಿಂಗವಿದ್ದು ಈಶ್ವರನ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಜ್ವಾಲಾಮುಖಿಯ ದರ್ಶನ ಮಾಡಿದ ಭಕ್ತರು ಈಶ್ವರನ ದೇವಸ್ಥಾನಕ್ಕೂ ಹೋಗಿ ದರ್ಶನ ಮಾಡುತ್ತಾರೆ. ದೇವಿ ಪಶ್ಚಿಮಕ್ಕೆ ಮತ್ತು ಈಶ್ವರ ಪೂರ್ವಕ್ಕೆ ಮುಖಮಾಡಿಕೊಂಡಿರುವುದರಿಂದ ಇವರು ಗಂಡ ಹೆಂಡತಿಯರಲ್ಲ ಎಂದು ತಿಳಿಯಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ನೈಸರ್ಗಿಕವಾಗಿ ದೊರೆಯುವ ಕೆಲವು ವಸ್ತುಗಳನ್ನು, ಪ್ರಾಣಿಗಳನ್ನು, ರಸ್ತೆಗಳನ್ನು ಪೂಜಿಸುತ್ತಿದ್ದ ಮನುಷ್ಯನಿಗೆ ಯಾವುದೇ ಗೊಂದಲವಿರಲಿಲ್ಲ.

ಹಿಂದೂ ಧರ್ಮದಲ್ಲಿ ಬೇರು ಬಿಟ್ಟ ಈ ಭಾವನೆಗಳಲ್ಲಿ ಸ್ಪಷ್ಟವಾಗುವ ಅಂಶವೆಂದರೆ ಹಿಂದೂವಿಗೆ ತನ್ನ ಮತದ ಒಂದು ಭಾಗವಾಗಿ ಶಕ್ತಿಯಾರಾಧನೆಯನ್ನು ಸ್ವೀಕರಿಸಲು ತೊಡಕಿತ್ತು.

ಅದಕ್ಕಾಗಿ ಗ್ರಾಮ ಮಟ್ಟದಲ್ಲಿ ಸ್ಥಳೀಯ ದೇವತೆಗಳು ಜನಿಸಿದವು. ಅವುಗಳಲ್ಲಿ ಸೌಮ್ಯ ದೇವತೆಗಳೆನಿಸಿದರೆ ಮತ್ತೆ ಕೆಲವು ದೇವತೆಗಳು ಉಗ್ರ ದೇವತೆಗಳು, ಆಧುನಿಕತೆಯತ್ತ ಮುಖಮಾಡಿಕೊಂಡು ಬರುತ್ತಿರುವ ಕೆಲವು ವ್ಯಕ್ತಿಗಳು ದೇವಸ್ಥಾನಕ್ಕೆ ಹೋಗುವುದು ತಮ್ಮ ಆಡಂಬರದ ಜೀವನವನ್ನು ತೋರಿಸುವುದಕ್ಕೋಸ್ಕರವೆಂಬಂತೆ ಕಾಣಿಸುತ್ತಿದೆ. ಹಿಂದೆ ದೇವರೆಂದರೆ ಹೆದರುತ್ತಿದ್ದ ಜನ ಇತ್ತೀಚಿನ ದಿನಗಳಲ್ಲಿ ದೇವಸ್ಥಾನಗಳಲ್ಲಿಯೇ ಕಳ್ಳತನ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಇತ್ತೀಚೆಗೆ ಉತ್ತನಹಳ್ಳಿಯ ಜ್ವಾಲಾಮುಖಿಯಲ್ಲೂ ಕಳ್ಳತನ, ಕೊಲೆ ನಡೆದಿದ್ದು ನಂತರ ಕದ್ದ ಒಡವೆ ಸಿಕ್ಕಿದ್ದು ಇಂದು ಇತಿಹಾಸ.

## ಅಡಿಟಿಪ್ಪಣಿ

೧) ಡಾ.ಪಿ.ಕೆ.ರಾಜಶೇಖರ–ಚಾಮುಂಡಿ ಸಿರಿ ಚಾಮುಂಡಿ, ಪುಟ. ೩.

೨) ಡಾ.ಪಿ.ಕೆ.ರಾಜಶೇಖರ–ಚಾಮುಂಡಿ ಸಿರಿ ಚಾಮುಂಡಿ, ಪುಟ. ೧೯.

೩) ನಿಂಗಪ್ಪ– ಅರ್ಚಕರು, ಜಾತಿ–ಲಿಂಗಾಯಿತ, ವಯಸ್ಸು–೮೦

೪) ಡಾ.ಪಿ.ಕೆ.ರಾಜಶೇಖರ, ಚಾಮುಂಡಿ ಸಿರಿ ಚಾಮುಂಡಿ, ಪುಟ. ೩೫

೫) ನಾಗಪ್ಪ–ಅರ್ಚಕರು, ಜಾತಿ–ಲಿಂಗಾಯಿತ, ವಯಸ್ಸು–೭೫.

೬) ಕರೀಗೌಡ, ಜಾತಿ–ಕುರುಬ, ವಯಸ್ಸು–೮೫.

## ಅಧ್ಯಾಯ - ೫

# ಜಾತ್ರೆಗಳು ಮತ್ತು ಉತ್ಸವಗಳು

ಭಾರತ ಹಳ್ಳಿಗಳ ದೇಶ. ಹಳ್ಳಿ ಎಂದರೆ ಜಾತ್ರೆ, ಉತ್ಸವ ಮತ್ತು ಹಬ್ಬಗಳಿಗೇನು ಕೊರತೆಯಿಲ್ಲ. ಜಾತ್ರೆ ಎಂದಾಕ್ಷಣ ಹತ್ತಾರು ಊರುಗಳ ಜನಜಂಗುಳಿಯ ಸದ್ದು ಗದ್ದಲ, ತೇರು ಬಂಡಿಗಳ ಸಡಗರ, ತಿಂಡಿತಿನಿಸು, ವಸ್ತು ಒಡವೆ, ಬಣ್ಣ ಬಣ್ಣದ ಆಟಿಕೆಯ ಸಾಮಾನುಗಳ ರಂಗು, ವ್ಯಾಪಾರ ವ್ಯವಹಾರಗಳ ಭರಾಟೆ ಹೀಗೊಂದು ಚಿತ್ರಪಟ ನಮ್ಮ ಕಣ್ಣಮುಂದೆ ಸುಳಿಯುತ್ತದೆ. ಜಾತ್ರೆ ಇಂದು ನೆನ್ನೆಯದಲ್ಲ. ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಜಾತ್ರೆಗಳು ನಡೆಯುತ್ತಾ ಬಂದಿವೆ. ಜಾತ್ರೆಗಳಲ್ಲೂ ವೈವಿಧ್ಯತೆ ಇದೆ. ಉದಾಹರಣೆಗೆ ದನಗಳ ಜಾತ್ರೆ, ಮುಡುಕುತೊರೆ ಜಾತ್ರೆ, ಕೆಸ್ತೂರು ಬಂಡಿಜಾತ್ರೆ, ಸುತ್ತೂರಿನ ಜಾತ್ರೆ ಇತ್ಯಾದಿ. "ವ್ಯಾಪಾರ ವ್ಯವಹಾರ-ಗಳೊಂದಿಗೆ ಜನಪದರಿಗೆ ಮನೋರಂಜನೆಯನ್ನು ಒಂದು ನಿರ್ಧಿಷ್ಟ ಕಾಲದಲ್ಲಿ, ಸ್ಥಳದಲ್ಲಿ ನಡೆಯುವ ಸಾಮಾಜಿಕ ಚಟುವಟಿಕೆಯನ್ನು ಜಾತ್ರೆ ಎನ್ನಬಹುದು".[೧]

ಜಾತ್ರೆ ಎಂಬುದು ಜಾನಪದ ಸಂಪ್ರದಾಯಗಳ ಒಂದು ಅಂಗ. ಜಾತ್ರೆ ಎಂದರೆ ಸಂಭ್ರಮ. ಈ ಸಂಭ್ರಮವನ್ನು ಗ್ರಾಮೀಣರು, ಸಾಮೂಹಿಕವಾಗಿ ಅನುಭವಿಸುತ್ತಾರೆ. ತಮ್ಮ ಊರಿನ ಜಾತ್ರೆಗೆ ಬಂಧುಬಳಗದವರನ್ನು, ಸ್ನೇಹಿತರನ್ನು ಕರೆಯಿಸಿಕೊಳ್ಳುವುದು, ತಾವು ಬಂಧುಗಳ ಊರಿನ ಜಾತ್ರೆಗೆ ಹೋಗಿ ಬರುವುದು ತೀರಾ ಸಾಮಾನ್ಯ. ಅವರದು ಗಡಿಬಿಡಿಯ ಬದುಕಲ್ಲ ನಾಲ್ಕಾರುದಿನ ಇದ್ದು ಜಾತ್ರೆಯ ಸೊಗಸನ್ನು ಸವಿಯುತ್ತಾರೆ. ಈ ಅವಧಿ ಅವರಿಗೆ ಒಂದು ವಿಶ್ರಾಂತಿಯೂ ಹೌದು. ಜಾತ್ರೆಗೆ ಬಂದವರಿಗೆ ಮೋಜು ವಿಶ್ರಾಂತಿ ನಿಜ, ಜಾತ್ರೆಯ ದಿನ ಸಂಭ್ರಮದೊಂದಿಗೆ ಧಣಿವು ಕೂಡಿರುತ್ತದೆ. ಮನೆ ತುಂಬ ಅತಿಥಿಗಳು ತುಂಬಿಕೊಂಡಾಗ ಮನೆಕೆಲಸಗಳಿಗೆ ಕೊರತೆಯೇ? ಇವನ್ನೆಲ್ಲಾ ಮುಗಿಸುವಲ್ಲಿ ಜಾತ್ರೆಯ ಸಡಗರ ಮುಗಿದುಹೋಗುತ್ತದೆ.

ಜಾತ್ರೆ ಎಂದು ಹುಟ್ಟಿತು? ಹೇಗೆ ಹುಟ್ಟಿತು? ಅದು ಮೂಲದಲ್ಲಿ ಯಾವ ರೂಪದಲ್ಲಿತ್ತು? ನಂತರ ಎಂತಹ ಬದಲಾವಣೆಗಳನ್ನು ಹೊಂದಿತು. ಈ ಬದಲಾವಣೆಗಳೇನು ಇವೆಲ್ಲ ರೋಚಕ ಪ್ರಶ್ನೆಗಳು. ಆದರೆ ಇವುಗಳಲ್ಲಿ ಕೆಲವು ಪ್ರಶ್ನೆಗಳಿಗೆ ಇತಿಹಾಸ ಜ್ಞಾನಕ್ಕಿಂತಲೂ ಹೆಚ್ಚಿನವನ್ನು ಊಹೆ ಮತ್ತು ತರ್ಕಗಳಿಂದ ಉತ್ತರಿಸಬಹುದು.

"ಮನುಷ್ಯ ಪ್ರಾಣಿಗೆ ದೇವರ ಕಲ್ಪನೆಯು ಸೃಷ್ಟಿಯಲ್ಲಿ ನಡೆಯುತ್ತಿರುವ ಹಗಲು, ರಾತ್ರಿ, ಬಿಸಿಲು, ಮಳೆ, ಗುಡುಗು, ಮಿಂಚು, ಭೂಕಂಪ ಮುಂತಾದ ಅದ್ಭುತ ಕಾರ್ಯಗಳನ್ನು ನೋಡಿಯೇ ಮೊದಲು ಉಂಟಾಯಿತೆಂದು ಆಧುನಿಕ ಪ್ರಾಣಿಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಮನುಷ್ಯ ಪ್ರಾಣಿಯು ಬಾಲ್ಯಾವಸ್ಥೆಯಲ್ಲಿದ್ದಾಗ ಸೃಷ್ಟಿಯ ಈ ಅದ್ಭುತ ಕಾರ್ಯಗಳ ಕಾರಣವನ್ನು ಕಂಡುಹಿಡಿಯುವುದು ಆತನ ಬುದ್ಧಿಶಕ್ತಿಗೆ ನಿಲುಕಲಿಲ್ಲ. ಅವೆಲ್ಲವುಗಳನ್ನು ಮಾಡುವಂತಹವನು ತಮಗೆ ಕಣ್ಣಿಗೆ ಕಾಣದಂತೆ ಇದ್ದಾನೆಂದೂ ಹಾಗೂ ಅವನೇ ದೇವರೆಂದು ಅವರು ಭಾವಿಸಿದ್ದರಲ್ಲದೇ ತಮಗೆ ತೊಂದರೆಯಾದಾಗಲೆಲ್ಲ ಆತನನ್ನು ಭಜಿಸಹತ್ತಿದರು. ದೇವರ ಸಂಬಂಧವಾದ ಭಾವನೆಯಲ್ಲಿ ಭೀತಿಯೇ ಮೊದಲು. ಭೀತಿಯ ನಿವಾರಣೆಗಾಗಿ ಮಾಡುವ ಪ್ರಯತ್ನಗಳೇ ದೇವರ ಆರಾಧನೆಗೆ ಕಾರಣೀಭೂತವಾಯಿತು. ಈ ಭಾವನೆ ಹೆಮ್ಮರವಾಗಿ ಬೆಳೆದು ಸೂರ್ಯ ಚಂದ್ರ, ಮರ, ಪಶುಪಕ್ಷಿಗಳನ್ನು ಪೂಜಿಸುವಷ್ಟು ಆಗಾಧವಾಗಿ ಬೆಳೆಯಿತು. ಇಂತಹ ನಂಬಿಕೆಯೇ ಕ್ರಮೇಣ ಒಂದು ಧಾರ್ಮಿಕ ಚೌಕಟ್ಟಿನೊಳಗೆ ಬೆಳೆದು ಸಮಾಜದ ಸ್ವಾಸ್ಥತೆಗೆ ಸ್ವಲ್ಪ ಮಟ್ಟಿಗೆ ಧಕ್ಕೆಯನ್ನುಂಟುಮಾಡಿತು. ಹೀಗೆ ಜಾತ್ರೆಗಳು ಧಾರ್ಮಿಕ ಹಿನ್ನೆಲೆಯಲ್ಲಿ ಹುಟ್ಟಿಕೊಂಡವು"[೨]

ಜಾತ್ರೆಗೂ ಹಬ್ಬಕ್ಕೂ ನಿಕಟವಾದ ಸಂಬಂಧವಿದೆ. ಹಾಗೆ ನೋಡಿದರೆ ನಾವು ಎಷ್ಟೋ ವೇಳೆ ಅವರೆಡರ ನಡುವಿನ ಭೇದವನ್ನು ಗುರುತಿಸುವುದೇ ಇಲ್ಲ. "ಒಂದು ನಿರ್ದಿಷ್ಟ ಜನಾಂಗವೊಂದು ನಿರ್ದಿಷ್ಟ ಕಾರಣಕ್ಕಾಗಿ ನಿರ್ದಿಷ್ಟ ದೈವವೊಂದಕ್ಕೆ ಸಾಂಪ್ರದಾಯಿಕ ಪೂಜೆ ಪುನಸ್ಕರಾದಿ ಆಚರಣೆಗಳಿಂದ ನಡೆದುಕೊಳ್ಳುವುದಕ್ಕೆ 'ಜಾತ್ರೆ' ಎಂದು ಹೆಸರು. ಕಿಟಲ್ ಕೋಶದಲ್ಲಿ 'ಜಾತ್ರೆ' ಪದಕ್ಕೆ ತೀರ್ಥಕ್ಷೇತ್ರ, ಪ್ರವಾಸ ಯಾವುದಾದರೊಂದು ದೇವರ ಹೆಸರಿನಲ್ಲಿ ಆಗಾಗ್ಗೆ ನಡೆಯುವ, ಬೇರೆ ಬೇರೆ ಕಡೆಗಳಿಂದ ಯಾತ್ರಾರ್ಥಿಗಳನ್ನು ಆಕರ್ಷಿಸುವ ಹಬ್ಬ ತೇರು, ಮೆರವಣಿಗೆ ಎಂದು ಅರ್ಥಗಳನ್ನು ಕೊಟ್ಟಿದೆ"[೩]

'ಜನಮರಳೋ ಜಾತ್ರೆಮರಳೋ' ಎಂಬ ಗಾದೆ ಮಾತಿದೆ. ಜನಸೇರಿದರೆ ಜಾತ್ರೆ ಎಂಬ ನಾಣ್ನುಡಿಯೇ ಇದೆಯಾದರೂ ಜನ ಸೇರಿದ ಮಾತ್ರಕ್ಕೆ ಜಾತ್ರೆಯಾಗುವುದಿಲ್ಲ. ಸಂತೆಯಾಗಬಹುದಷ್ಟೆ. ಸಂತೆಯ ವ್ಯಾಪಾರ ವಹಿವಾಟುಗಳು ಜಾತ್ರೆಯಲ್ಲಿ ಕಂಡು-ಬರುತ್ತವೆಯಾದರೂ ಜಾತ್ರೆಯಲ್ಲಿನ ಜನರಿಗೆ ವ್ಯಾಪಾರ ಆಕರ್ಷಣೆ ಉಂಟುಮಾಡಿದರೂ ಜಾತ್ರೆಯಲ್ಲಿ ದೈವದ ಆಚರಣೆ ಮುಖ್ಯವಾಗಿರುತ್ತದೆ.

**ಜಾತ್ರೆಗಳ ಸ್ವರೂಪ:**

ಎಲ್ಲಾ ಜಾತ್ರೆಗಳ ಸ್ವರೂಪ ಒಂದೇ ಬಗೆಯಾದರೂ ಗ್ರಾಮೀಣರು ಆಚರಿಸುವ ಜಾತ್ರೆಗಳಿಗೂ, ಶಿಷ್ಟರು ಆಚರಿಸುವ ಜಾತ್ರೆಗಳಿಗೂ ವ್ಯತ್ಯಾಸವಿದೆ. ಶಿಷ್ಟರು ಆಚರಿಸುವ ಜಾತ್ರೆಗಳು ಪುರಾಣಗಳ ಹಿನ್ನೆಲೆಯನ್ನು ಹೊಂದಿದಂತಹವಾಗಿದ್ದು, ಅವುಗಳ ಪೂಜೆ, ವಿಧಿ ವಿಧಾನಗಳು ಆಗಮೋಕ್ತವಾಗಿ ನಡೆಯುತ್ತವೆ. ನಿರ್ದಿಷ್ಟವಾರ, ತಿಥಿ, ನಕ್ಷತ್ರಗಳಿಗನುಗುಣವಾಗಿ ಅವು ಜರುಗುತ್ತವೆ. ಕೆಲವೊಂದು ಊರಿನಲ್ಲಿ ಆಚರಣೆಗೊಳ್ಳುವ ಜಾತ್ರೆಗಳು ಸರ್ಕಾರದ ನೇತೃತ್ವದಲ್ಲಿ ನಡೆಯುತ್ತದೆ. ಉದಾಹರಣೆಗೆ ಬೆಂಗಳೂರು ಕರಗ, ತಲಕಾಡು ಜಾತ್ರೆ ಇತ್ಯಾದಿ.

ಗ್ರಾಮೀಣ ಪ್ರದೇಶದ ಜಾತ್ರೆಗಳ ಸಂದರ್ಭದಲ್ಲಿ ಊರಿನ ನಾನಾ ಸಮುದಾಯದ ಗುಂಪಿನ ಜನರೆಲ್ಲರ ಸರ್ವಾನುಮತದಿಂದ ವರ್ಷದ ಯಾವುದೋ ಒಂದು ವಾರದಲ್ಲಿ ಜಾತ್ರೆಯು ವಿಜೃಂಭಣೆಯಿಂದ ಜರುಗುತ್ತವೆ. ಉದಾಹರಣೆಗೆ – ಚಿಕ್ಕಲ್ಲೂರು ಜಾತ್ರೆ, ಸಿದ್ದಪ್ಪಾಜಿಯ ಜಾತ್ರೆ, ನಂಜನಗೂಡಿನ ಜಾತ್ರೆ, ಮುಡುಕುತೊರೆ ಜಾತ್ರೆ ಇತ್ಯಾದಿ ಜಾತ್ರೆಯಲ್ಲಿ ಅಂಗಡಿಮುಂಗಟ್ಟುಗಳು ಜಮಾಯಿಸಿರುತ್ತವೆ. ವೈವಿಧ್ಯ ಕಲಾ ಪ್ರದರ್ಶನಗಳು, ಮನರಂಜನೆ, ವ್ಯಾಪಾರ, ವಹಿವಾಟು, ನಡೆದು ಜಾನುವಾರುಗಳು ಸೇರಿರುತ್ತವೆ. ನವವಧುವರರು ಹಣ್ಣುಜವನವನ್ನು ಉತ್ಸವದ ತೇರಿಗೆ ಎಸೆಯುತ್ತಾರೆ.

ಇವಕ್ಕಿಂತ ಮುಖ್ಯವಾಗಿ ಜಾತ್ರೆಯಲ್ಲಿ ದೇವರಿಗೆ ಸಂಬಂಧಿಸಿದ ಪೂಜೆ ಆಚರಣೆಗಳು ಅಲ್ಲಿಗಿಂತ ಹೆಚ್ಚು ಕಠಿಣವಾಗಿ ನಡೆಯುತ್ತವೆ.

ನಿರ್ದಿಷ್ಟ ವಂಶಕ್ಕೆ ಮೂಲಕ್ಕೆ ಸೇರಿದ ವ್ಯಕ್ತಿಯೇ ಜನಪದರಲ್ಲಿ ಪೂಜಾರಿಯಾಗಿರುತ್ತಾನೆ. ಬಹಳ ಸಂದರ್ಭಗಳಲ್ಲಿ ಪೂಜಾರಿ ಜಾತ್ರೆ ನಡೆಯುವ ಸಾಮಾಜಿಕ ಗುಂಪಿಗೆ ಸೇರಿದವನಾಗಿರುತ್ತಾನೆ. ಕೆಲವು ಜಾತ್ರೆಗಳಲ್ಲಿ ಶಾಖಾಹಾರಿ ಭೋಜನ ಪ್ರಸಿದ್ಧವಾಗಿದ್ದರೆ, ಮತ್ತೆ ಕೆಲವು ಜಾತ್ರೆಗಳಲ್ಲಿ ಮಾಂಸಾಹಾರ ಆಚರಣೆ ಇರುತ್ತದೆ.

ಜಾತ್ರೆಯ ಮೂಲ ಉದ್ದೇಶ ಸಮಷ್ಟಿಯ ಚತುರ್ವಿಧ ಪುರುಷಾರ್ಥದೆಡೆಗೆ ಮನಸ್ಸನ್ನು ಅಭಿಮುಖವಾಗುವಂತೆ ಮಾಡುತ್ತದೆ. ಅನಾದಿಕಾಲದಿಂದಲೂ ಮಾನವನ ಲೌಕಿಕ ಹಾಗೂ ಧಾರ್ಮಿಕ ಬದುಕಿನಲ್ಲಿ ಒಂದು ಸಾಮರಸ್ಯವಿದೆ. ಈ ಸಾಮರಸ್ಯವನ್ನು ಜಾತ್ರೆಯಲ್ಲಿ ಕಾಣಬಹುದು. ಜಾತ್ರೆಯಲ್ಲಿ ಭಿನ್ನ ಗುಣ ಸ್ವಭಾವ, ಅಭಿರುಚಿ, ಅಂತಸ್ತು, ವಯೋಮಾನಗಳ ಜನರೆಲ್ಲ ಒಂದೆಡೆ ಕಲೆಯಲು ಅವಕಾಶ ಕಲ್ಪಿಸಿದೆ. ಜಾತ್ರೆಯಿಂದ

ಸಾಮಾಜಿಕನ ಮನಸ್ಸು ಧಾರ್ಮಿಕತೆಯ ಪನ್ನೀರಿನಲ್ಲಿ ಮಿಂದು, ಲೌಕಿಕ ಸುಖ, ಸಂತೋಷವನ್ನು ಉಂಡು ನಿರಂತರ ದುಡಿಮೆಯ ಧಣಿವಿನಿಂದ ಅಲ್ಪ ವಿರಾಮ ಪಡೆಯುತ್ತದೆ. ಗೊಂದಲದ ಬದುಕಿನಿಂದ ಕ್ಷಣಕಾಲ ತಪ್ಪಿಸಿಕೊಂಡು, ಲೌಕಿಕ ಪಾರಮಾರ್ಥಿಕಗಳೆರಡರ ಸವಿ ಸುಖ ದರ್ಶನ ಪಡೆಯಲು ಅನುಕೂಲವಾಗುತ್ತದೆ.

ಜಾತ್ರೆಯೂ ಬಹುತೇಕ ಎಲ್ಲಾ ಗ್ರಾಮದಲ್ಲೂ ನಡೆಯುತ್ತದೆ. ನೆರವೇರದ ಯಾವ ಗ್ರಾಮವೂ ಇಲ್ಲ. ಇಂದಿನ ಮಿಶ್ರ ಸಂಸ್ಕೃತಿಯ ನಗರಗಳಲ್ಲೂ ಜಾತ್ರೆಗಳು ಜರುಗುವುದನ್ನು ಕಾಣುತ್ತೇವೆ. ಪ್ರತಿ ಜಾತ್ರೆಗೂ ಒಂದೊಂದು ಆದಿದೇವತೆ, ಗ್ರಾಮದೇವತೆ, ಪ್ರದೇಶದೇವತೆ ಇತ್ಯಾದಿಗಳಿಗೆ ಅವುಗಳದ್ದೇ ಆದ ಪ್ರತ್ಯೇಕ ಸ್ಥಳ ಪುರಾಣ, ಐತಿಹ್ಯ ಕ್ಷೇತ್ರ ಮಹಾತ್ಮೆ ಇದ್ದು ಇವುಗಳ ಹಿನ್ನೆಲೆಯಲ್ಲಿ ಜಾತ್ರೆಗಳು ನಡೆಯುತ್ತವೆ. ಈ ನಿಟ್ಟಿನಲ್ಲಿ ಮೈಸೂರು ತಾಲ್ಲೂಕಿನ ವ್ಯಾಪ್ತಿಯಲ್ಲಿರುವ ಉತ್ತನಹಳ್ಳಿಯಲ್ಲಿಯೂ ಹಲವು ಜಾತ್ರೆ ಮತ್ತು ಉತ್ಸವಗಳು ನಡೆಯುತ್ತವೆ. ಇಲ್ಲಿ ನಡೆಯುವ ಜಾತ್ರೆ ಮತ್ತು ಉತ್ಸವಗಳೆಂದರೆ

ಅ) ಶ್ರೀ ಜ್ವಾಲಾಮುಖಿ ತ್ರಿಪುರ ಸುಂದರಿ ಜಾತ್ರೆ

ಆ) ಕಾರ್ಗಳಮ್ಮನವರ ಉತ್ಸವ

ಇ) ಶನಿದೇವರ ಉತ್ಸವ ಇತ್ಯಾದಿ

**ಅ) ಶ್ರೀ ಜ್ವಾಲಾಮುಖಿ ತ್ರಿಪುರ ಸುಂದರಿ ಜಾತ್ರೆ:**

ಗ್ರಾಮ್ಯ ಜನಾಂಗಗಳಲ್ಲಿ ಆದಿಕಾಲದಿಂದಲೂ ಉಳಿದುಬಂದಿರುವ ದೇವತೆಗಳನ್ನೂ ಜನಪದ ದೇವತೆಗಳೆಂದು ಕರೆಯಬಹುದು. ಶಿಷ್ಟ ದೇವತೆಗಳ ಆರಾಧನೆ ಬಳಕೆಗೆ ಬರುವ ಮುನ್ನವೇ ಈ ದೇವತೆಗಳು ಇದ್ದುದಲ್ಲದೆ ಅವುಗಳಲ್ಲಿ ಕೆಲವು ದೇವತೆಗಳ ಸೃಷ್ಟಿಗೆ ಮೂಲವೂ ಆಗಿದ್ದವು. ಜನಪದ ದೇವತೆಗಳು ಶಿಷ್ಟ ಜನಾಂಗದವರಿಂದ ಆರಾಧನೆಗೊಳ್ಳುವುದು ಅಪರೂಪ. ಕರ್ನಾಟಕದಲ್ಲಿ ಬೇರೆ ಬೇರೆ ಊರುಗಳಲ್ಲಿ ಈ ದೇವತೆಗಳನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುವುದು ರೂಢಿಯಲ್ಲಿದೆ. ಕೆಲವು ದೇವತೆಗಳು ಸ್ಥಳೀಯವಾಗಿ ಮಹತ್ವ ಪಡೆದು ಅವುಗಳ ಜೊತೆಗೆ ಆಯಾ ಊರಿನ ಹೆಸರು ಸೇರಿಕೊಂಡಿವೆ. ಉದಾಹರಣೆಗೆ ಗೋಣನಹಳ್ಳಿ ಮಾರಿ, ಉತ್ತನಹಳ್ಳಿ ಮಾರಿ, ತಾಂಡವಪುರದ ಮಾರಿ ಇತ್ಯಾದಿ.

ಮೈಸೂರಿನ ಆದಿದೇವತೆಯಾದ ಶ್ರೀ ಚಾಮುಂಡೇಶ್ವರಿಯ ತಂಗಿ ಶ್ರೀ ಜ್ವಾಲಾಮುಖಿ ತ್ರಿಪುರಸುಂದರಿಯನ್ನು 'ಉತ್ತನಹಳ್ಳಿ ಮಾರಮ್ಮ' ಎಂದೇ ಸುತ್ತಮುತ್ತಲಿನ ಊರುಗಳಲ್ಲಿ ಕರೆಯುತ್ತಾರೆ. ಈ ದೇವತೆ ರಕ್ತ ಬೀಜಾಸುರನ ಸಂಹಾರದಲ್ಲಿ ಅಕ್ಕ ಚಾಮುಂಡೇಶ್ವರಿಗೆ ನೆರವಾಗಿ 'ಉತ್ತನಹಳ್ಳಿಯಲ್ಲಿ ನೆಲಸು' ಎಂಬ ಅನುಗ್ರಹ ಪಡೆದವಳೆಂದು ಜನಪದರ ನಂಬಿಕೆ.

ರಕ್ತ ಬೀಜಾಸುರ ಮತ್ತು ಚಾಮುಂಡಿಗೂ ಯುದ್ಧ ನಡೆಯುವ ಸಂದರ್ಭದಲ್ಲಿ ಜ್ವಾಲಾಮುಖಿ ತನ್ನ ನಾಲಿಗೆಯನ್ನು ಭೂಮಿಯ ಮೇಲೆ ಹರಡಿ ಆ ರಾಕ್ಷಸನ ಒಂದು ತೊಟ್ಟು ರಕ್ತವನ್ನು ನೆಲಕ್ಕೆ ಬೀಳದ ಹಾಗೆ ಕುಡಿದು ಚಾಮುಂಡಿಗೆ ನೆರವಾದಳೆಂದು ಪ್ರತೀತಿ ಇದೆ. ಆದ್ದರಿಂದಲೇ ಇಲ್ಲಿನ ಜನರು ಯಾರಾದರೂ ತಪ್ಪುಗಳನ್ನು ಮಾಡಿದರೆ ಇವಳು ಸಾಮಾನ್ಯಳಲ್ಲ ನಾಲಿಗೆ ಹಾಕಿ ರಕ್ತವನ್ನು ಕುಡಿಯುತ್ತಾಳೆಂದು ನಂಬಿದ್ದಾರೆ.

ಈ ದೇವಿಯ ಜಾತ್ರೆ ಪ್ರತಿ ವರ್ಷ ಫೆಬ್ರವರಿ ತಿಂಗಳಿನಲ್ಲಿ ಭಾನುವಾರದಿಂದ ಸುಮಾರು ನಾಲ್ಕು ದಿನಗಳ ತನಕ ವೈಭವವಾಗಿ ನಡೆಯುತ್ತದೆ. ಇಲ್ಲಿಯ ಜಾತ್ರೆಯ ದಿನದಂದೆ ಏಳು ಊರುಗಳಲ್ಲಿ ಅಂದರೆ ಹಡಜನ, ಚಿಕ್ಕೇಗೌಡನಹುಂಡಿ, ಸಜ್ಜೆಹುಂಡಿ, ಹೊಸ ಹುಂಡಿ ಮುಂತಾದ ಗ್ರಾಮಗಳಲ್ಲೂ ಹಬ್ಬ. ಉತ್ತನಹಳ್ಳಿಯಲ್ಲಿ ನಡೆಯುವ ಜಾತ್ರೆಯಲ್ಲಿ ಸುತ್ತಲಿನ ಊರುಗಳ ಜನರಲ್ಲದೆ ಇನ್ನೂ ಮುಂತಾದ ಸುತ್ತಮುತ್ತಲ ಹಳ್ಳಿಯ ಮತ್ತು ನಗರ ಪ್ರದೇಶದಿಂದ ಬಂದು ಜಾತ್ರೆಯಲ್ಲಿ ಭಾಗವಹಿಸುತ್ತಾರೆ.

ಈ ದೇವಸ್ಥಾನವು ಮುಜರಾಯಿ ಇಲಾಖೆಯ ಸ್ವಾಮ್ಯಕ್ಕೊಳಪಟ್ಟಿರುವುದರಿಂದ ಜಾತ್ರೆಯಂದು ದೇವಿಗೆ ಧರಿಸುವ ಆಭರಣಗಳ ಸುರಕ್ಷತೆಗೋಸ್ಕರ ಮತ್ತು ಜನಗಳನ್ನು ನಿಯಂತ್ರಿಸಲು ಪೊಲೀಸ್ ಸಿಬ್ಬಂದಿಯನ್ನು ನೇಮಿಸುತ್ತಾರೆ.

ಮೂರು ದಿನಗಳಲ್ಲಿ ವಿಶೇಷವಾಗಿ ಭಾನುವಾರ ಸಂಜೆ ಕನ್ಯಾಕನ್ನಡಿ ಉತ್ಸವ, ಸೋಮವಾರ ತಂಪು ಮತ್ತು ಬಾಯಿಗೆ ಬೀಗ ಹಾಕಿಸಿಕೊಳ್ಳುವುದು ಹಾಗೂ ಮಂಗಳವಾರದಂದು ಈ ದೇವಿಗೆ ಕುರಿ, ಕೋಳಿ, ಆಡುಗಳನ್ನು ಬಲಿಕೊಡುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ 'ಪೀಪಲ್ಸ್ ಫಾರ್ ಅನಿಮಲ್ಸ್' ಸಂಸ್ಥೆಯವರು ಈ ರೀತಿಯ ಬಲಿಯನ್ನು ನಿಷೇಧಿಸಿ ಆಜ್ಞೆಯನ್ನು ಹೊರಡಿಸಿದ್ದಾರೆ.

**ರಕ್ತಬೀಜಾಸುರನ ಸಂಹಾರದ ಕಥೆ**

ಚಾಮುಂಡೇಶ್ವರಿ ತನ್ನ ಬೆವರನ್ನು 'ಕೌಶಿಕೆ' ಎಂದು ಕರೆದಾಗ ಜ್ವಾಲೆಯಿಂದ ಉದ್ಭವವಾದವಳೇ 'ಜ್ವಾಲಾಮುಖಿ ತ್ರಿಪುರ ಸುಂದರಿ ದೇವಿ' ಹೀಗೆ ಉದ್ಭವವಾದ

ತ್ರಿಪುರ ಸುಂದರಿಯು ತನ್ನ ನಾಲಿಗೆಯನ್ನೆ ಯುದ್ಧಭೂಮಿ ಮಾಡಿ ಚಾಮುಂಡಿಗೆ ಸಹಕರಿಸುತ್ತಾಳೆ ರಕ್ತ ನೆಲಕ್ಕೆ ಬೀಳದಂತೆ ನೋಡಿಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಚಾಮುಂಡಿ ತಾಯಿಯು 'ರಕ್ತಬೀಜಾಸುರ'ನನ್ನು ಸಂಹರಿಸುತ್ತಾಳೆ ಎನ್ನುತ್ತದೆ ಪುರಾಣ. ಹೀಗಾಗಿ ಇಲ್ಲಿಗೆ ಸಾಕಷ್ಟು ಮಂದಿ ರಾಜ್ಯ, ಹೊರರಾಜ್ಯದ ಭಕ್ತರು ಆಗಮಿಸುತ್ತಾರೆ ಎನ್ನುತ್ತಾರೆ ಗ್ರಾಮಸ್ಥರು.

ಪ್ರತಿಪಕ್ಷ ಜಾತ್ರೆಗೆ ಜ್ವಾಲಾಮುಖಿ ತ್ರಿಪುರ ಸುಂದರಿಯನ್ನೆ ಸುಮಾರು ಹದಿನೈದು ಕೆ.ಜಿ. ಚಿನ್ನದಿಂದ ಅಲಂಕರಿಸಲಾಗುತ್ತದೆ. ಪ್ರತಿವರ್ಷ ಸರದಿಯಂತೆ ಒಬ್ಬೊಬ್ಬ ಅರ್ಚಕರ ಮನೆಯಲ್ಲಿ ಉತ್ಸವಮೂರ್ತಿ ಇಡಲಾಗುತ್ತದೆ. ಇಲ್ಲಿಗೆ ಅಪ್ಪಟ ಚಾಮುಂಡಿಯ ಭಕ್ತರು ತಪ್ಪದೆ ಆಗಮಿಸುವುದುಂಟು.

ವಿಶ್ವವಿಖ್ಯಾತ ಚಾಮುಂಡಿಬೆಟ್ಟದಲ್ಲಿರುವ ನಾಡದೇವತೆ ಶ್ರೀ ಚಾಮುಂಡೇಶ್ವರಿಗೆ ಇರುವಷ್ಟೇ ಭಕ್ತರನ್ನು ಹೊಂದಿರುವ ದೇವಸ್ಥಾನವಿರುವ ಊರಿದು. ಚಾಮುಂಡಿ ನೋಡಲು ಬರುವ ಬಹುತೇಕರು ಇಲ್ಲಿಗೂ ಆಗಮಿಸುತ್ತಾರೆ. ಒಂದರ್ಥದಲ್ಲಿ ಪುಟ್ಟ ಊರಾದರೂ ಇದೊಂದು ಧಾರ್ಮಿಕ ಸ್ಥಳವೂ ಹೌದು. ಈ ಗ್ರಾಮ ಮೈಸೂರು ತಾಲ್ಲೂಕಿನ ಉತ್ತನಹಳ್ಳಿ. ಇಲ್ಲಿರುವ ಶ್ರೀ ಜ್ವಾಲಾಮುಖಿ ತ್ರಿಪುರಸುಂದರಿಯಿಂದಾಗಿ ಈ ಊರು ಜನಪ್ರಿಯ ಊರಿನ ಹೆಸರು ಉತ್ತನಹಳ್ಳಿಯಾದ್ದರಿಂದ ದೇವಿಗೂ ಉತ್ತನಹಳ್ಳಿಯಮ್ಮ ಎಂಬ ಹೆಸರು ಬಂದಿದೆ.

**ಜ್ವಾಲಾಮುಖಿ ತ್ರಿಪುರ ಸುಂದರಿ/ಉತ್ತನಹಳ್ಳಿ ಮಾರಮ್ಮನ ಜಾತ್ರೆಯ ಕ್ರಿಯಾ ವಿಧಿಗಳು:**

ಜಾತ್ರೆಯ ಸಂದರ್ಭದಲ್ಲಿ ವಿವಿಧ ರೀತಿಯ ಕ್ರಿಯಾ ವಿಧಿಗಳನ್ನು ಗ್ರಾಮದ ಜನತೆಯು ಕೈಗೊಳ್ಳುತ್ತಾರೆ. ಅವುಗಳ ಸ್ಥೂಲ ನೋಟವನ್ನು ನೋಡುವುದಾದರೆ

**ಪೀಡುಗಡೆಯುವುದು**

ಜಾತ್ರೆ ವಿಶೇಷವಾಗಿ ನಡೆಯುವ ಈ ಕಾರ್ಯ ಶುಕ್ರವಾರದ ರಾತ್ರಿ ಸರಿ ಸುಮಾರು ೮-೩೦ಕ್ಕೆ ಪ್ರಾರಂಭವಾಗುತ್ತದೆ. ಈ ಕ್ರಿಯೆಗೆ 'ಸೂತಕ' ಕಳೆಯುವುದು ಎಂದು ಕರೆಯುತ್ತಾರೆ. ಆದಿಕರ್ನಾಟಕದವರಲ್ಲಿ ಒಬ್ಬನು ಗ್ರಾಮದ ಸಮಸ್ತ ಜನತೆಯ ಮನೆಗಳಿಗೆ ಹೋಗಿ ಬರುತ್ತಾನೆ. ಇವನು ಮನೆಯೊಳಕ್ಕೆ ಒಕ್ಕಿದರೆ ಇಲ್ಲಿಯವರೆಗೆ ಇದ್ದ ಸೂತಕ, ದೋಷಗಳು ನಿವಾರಣೆಯಾಗುತ್ತವೆಂಬ ನಂಬಿಕೆ ಒಂದು ಕಡೆಯಾದರೆ ಬೇರೆ ದಿನಗಳಲ್ಲಿ ಮನೆಯ ಬಾಗಿಲ ಹತ್ತಿರ ಸೇರಿಸದವರು ಜಾತ್ರೆಯ ನೆಪದಿಂದಲಾದರು ಅವಕಾಶ ನೀಡಿ ಅವರ ಜೊತೆ ಬಾಂದವ್ಯ ಬೆಳೆಸುತ್ತಾರೆ. ಹೀಗೆ ಒಳಹೊಕ್ಕು ಹೊರಗಡೆ

ಬರುತ್ತಿರುವಾಗ ಅವನ ಕಾಲಿಗೆ ಬೂದಿಯನ್ನು ಎರಚುತ್ತಾರೆ. ಇವನ ವೇಷ ಭೂಷಣಗಳನ್ನು ಕಂಡು ನಾಯಿಗಳು ಬೊಗಳಲು ಪ್ರಾರಂಭಿಸುತ್ತವೆ, ದನ, ಕರು ಕುರಿಗಳು ಬೆದರುತ್ತವೆ, ಹೈಕಳು, ಮಕ್ಕಳು ಹೆದರಿಕೊಳ್ಳುತ್ತವೆ. ಒಂದು ದುಡಿ, ಹಳೆಯ ಒಂದು ಅಂಗಿ, ಚಡ್ಡಿ, ಗೊಪ್ಪೆಯಾಗಿ ಒಂದು ಗೋಣಿಚೀಲ ಹಾಕಿಕೊಂಡು ಯಾ..... ಯು.... ಚು....ಬ್ಯಾ ಎಂದು ಪ್ರತಿ ಮನೆಗೂ ತಪ್ಪದೆ ನುಗ್ಗುತ್ತಾನೆ. ಈತನು ಹೊಕ್ಕು ಹೋದ ಅನಂತರ ಯಾವುದೇ ಮನೆಯಲ್ಲು ಮೆಣಸಿನ ಕಾಯಿ ಸುಡುವ, ಉಪ್ಪಿಟ್ಟು ಮಾಡುವ, ವಗ್ಗರಣೆ ಹಾಕುವ, ಈ ರೀತಿಯ ಕರ್ಕಲನ್ನು ಹಾಕುವ ಹಾಗಿಲ್ಲ. ನಾನು ಏಕೆ ಹೀಗೆ ಎಂದು ಕೇಳಿದಾಗ, 'ಇದು ಸಂಪ್ರದಾಯ ಹಿರಿಕ್ರು ಹೀಗೆ ಮಾಡಿಕೊಂಡು ಬಂದ್ರು ಅದನ್ನೆ ನಾವು ಮಾಡುತ್ತಿದ್ದೇವೆ ನಮ್ಗೊಂದು ತಿಳಿಯದು' ಎಂದು ಹೇಳಿದರು.

**ಹೊಸ ನೀರು (ಮೀಸಲು ನೀರು ತರುವುದು)**

ಈ ಕ್ರಿಯಾ ವಿಧಿಯು ಶನಿವಾರ ನಡೆಯುತ್ತದೆ. ಜಾತ್ರೆಯ ವಿಶೇಷದಂತೆ ಇದು ನೆರವೇರುತ್ತದೆ. ಮನೆಗಳಲ್ಲಿ ಧುಂಬು, ಧೂಳು ಗುಡಿಸಿ, ಸುಣ್ಣ-ಬಣ್ಣವನ್ನು ತುಂಬಿ ಕಿತ್ತಿರುವ ಗೋಡೆಗಳಿಗೆ 'ವರಮಣ್ಣು' ಕೊಟ್ಟು ತಾರಿಸಿ, ಗುಡಿಸಿ ಮಡಿವಂತಿಕೆಯಿಂದ ಎಲ್ಲರು ಸ್ನಾನ ಮಾಡಿ ಹೊಸ ನೀರನ್ನು (ಮೀಸಲು ನೀರು) ತರಲು ಸಿದ್ದತೆ ಮಾಡುತ್ತಾರೆ. ಈ ಮಡಿಯ ನೀರನ್ನು ತಂದು ದೇವಿಯ ನೈವೇದ್ಯಕ್ಕೆಂದು ತಂಬಿಟ್ಟನ್ನು ಮಾಡುತ್ತಾರೆ. ಅಕ್ಕಿಯನ್ನು ನೆನೆಯಿಸಿ, ನೆನೆಯಿಸಿದ ಅಕ್ಕಿಯನ್ನು ಒಳ್ಳಿನಲ್ಲಿ ಹಾಕಿ ಸ್ನಾನ ಮಾಡಿ ಒಪ್ಪತ್ತು ಇರುವವರು ಒನಕೆಯಿಂದ ಕುಟ್ಟಿ ಪುಡಿ ಮಾಡಿಕೊಂಡ ನಂತರ ಒಲೆಯನ್ನು ಹಚ್ಚಿ ಪಾತ್ರೆಯನ್ನು ಇಟ್ಟು ಇಂತಿಷ್ಟು ನೀರು ಬೆಲ್ಲವನ್ನು ಹಾಕಿ ಪಾಕ ತೆಗೆಯುತ್ತಾರೆ. ಪಾಕ ಬಂದ ಮೇಲೆ ಅಕ್ಕಿಯ ಪುಡಿಯನ್ನು ಅದರಲ್ಲಿ ಸುರಿದು ಹಿಟ್ಟಿನ ದೊಣ್ಣೆಯಿಂದ ತಿರುಗಿಸುತ್ತಾರೆ. ಗಟ್ಟಿಯಾದ ಅನಂತರ ತಮಗೆ ಬೇಕಾದ ಆಕಾರದಲ್ಲಿ ತಂಬಿಟ್ಟನ್ನು ಮಾಡುತ್ತಾರೆ.

**ಕನ್ಯಾ ಕನ್ನಡಿ**

ಕನ್ಯಾ ಕನ್ನಡಿಯ ಆಚರಣೆಯು ಭಕ್ತರಿಗೆ ದೇವಿಯನ್ನು ಸಾಂಕೇತಿಕ ರೂಪದಲ್ಲಿ ಪ್ರದರ್ಶಿಸುವುದಾಗಿದೆ. ಈ ಕನ್ಯಾ ಕನ್ನಡಿಯ ಕ್ರಿಯಾವಿಧಿಯು ಭಾನುವಾರ ನೆರವೇರುತ್ತದೆ. ದೇವಾಲಯದಲ್ಲಿ ಉತ್ಸವ ಮೂರ್ತಿ ಇಲ್ಲದಿರುವುದರಿಂದ ಕನ್ಯಾಕನ್ನಡಿಯನ್ನು ದೇವಾಲಯದ ಲಿಂಗಾಯಿತಿ ಅರ್ಚಕರು ತಮ್ಮ ಮನೆಯಲ್ಲೆಯ ಪ್ರತಿಷ್ಠಾಪಿಸಿ ಪೂಜೆಯನ್ನು ನೆರವೇರಿಸುತ್ತಾರೆ. ಪೂಜೆಯಾದ ಮೇಲೆ ಗ್ರಾಮದ

ಲಿಂಗಾಯಿತರ ಋತುಮತಿಯಾಗದ, ಅವಿವಾಹಿತ ಕನ್ಯೆಯರು ಈ ಕನ್ಯಾ ಕನ್ನಡಿಯನ್ನು ಕಬ್ಬಿಣದಿಂದ ಮಾಡಿದ ತೇರಿನ ಒಳಗಡೆ ಕೊಂಡೊಯ್ಯುತ್ತಾರೆ. ದೇವಾಲಯಕ್ಕೆ ಸಂಬಂಧಿಸಿದ ಅಗಸರು ಹಾಸಿಗೆ ನಾಡ ಮಡಿ ಹಾಸುತ್ತಾರೆ. ಇದರ ಮೇಲೆ ಕಾಲಿಟ್ಟು ಊರಿನ ಬಸವ ಅರ್ಚಕರು, ಕನ್ಯಾ ಕನ್ನಡಿಯನ್ನು ಹೊತ್ತ ಕನ್ಯೆಯರು ಸಾಗುತ್ತಾರೆ. ಪೂಜೆ ಮಾಡಿಸುವವರು ಎರಡು ಗ್ರಾಮದವರು ಮಾಡಿಸಬಹುದು. ಛತ್ರಿ ಚಾಮರಗಳನ್ನಿಡಿದು, ಕೊಂಬು ಕಹಳೆ ಊದುತ್ತಾ ಉತ್ತನಹಳ್ಳಿ, ಏಳಿಗೆಹುಂಡಿ ಎರಡು ಗ್ರಾಮದ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ದೇವಿಯು ವಿದ್ಯುತ್, ಹೂವಿನ ಅಲಂಕಾರದಿಂದ ಕಂಗೊಳಿಸುತ್ತಿರುತ್ತಾಳೆ. ಓಲಗದವರು ಓಲಗ ಬಾರಿಸುತ್ತಾ ಪೂಜಾ ಕುಣಿತ ಮತ್ತು ಜನಪದ ಹಾಡುಗಳನ್ನು ದೇವಿಯ ಕುರಿತಾಗಿ ಹಾಡುತ್ತಾರೆ. ಮದ್ದನ್ನು ಸುಡಲು ಪ್ರತ್ಯೇಕವಾದ ಒಂದು ಜನಾಂಗವೇ ಇದ್ದು 'ಇಂತಿಷ್ಟು ವರಿ' ಎಂದು ಸಂಗ್ರಹಿಸಿ ಕನ್ಯಾ ಕನ್ನಡಿಯ ಮುಂದೆ ಮದ್ದನ್ನು ಸಿಡಿಸುತ್ತಾರೆ. ಹೀಗೆ ಕನ್ಯಾ ಕನ್ನಡಿಯು ಸರಿ ಸುಮಾರು ರಾತ್ರಿ ೯ ಗಂಟೆಗೆ ಪ್ರಾರಂಭವಾಗಿ ಬೆಳಗಿನ ಜಾವ ೪ ಗಂಟೆಗೆ ಮುಕ್ತಾಯವಾಗುತ್ತದೆ. ಕನ್ಯಾ ಕನ್ನಡಿಯ ದೇವತೆಯನ್ನು ಮೆರವಣಿಗೆ ಮಾಡಿ ದೇವಾಲಯಕ್ಕೆ ಒಯ್ದು ಕೂಡಲೇ ಈ ವಿಧಿಗೆ ತೆರೆ ಬೀಳುತ್ತವೆ.

**ಬಾಯಿ ಬೀಗ**

ಕನ್ಯಾ ಕನ್ನಡಿ ಆಚರಣೆಯ ಮರುದಿನವಾದ ಸೋಮವಾರ ಬೆಳಿಗ್ಗೆ ಅಮ್ಮನ ದೇವಾಲಯದ ಪ್ರಾಕಾರದಲ್ಲೆ ಬಾಯಿ ಬೀಗದ ಆಚರಣೆ ನಡೆಯುತ್ತದೆ. ಬಾಯಿ ಬೀಗ ಹಬ್ಬವೆಂದರೆ ಬಾಯಿಗೆ ಬೀಗ ಹಾಕುವುದು ಹಾಗೂ ತೆಗೆಯುವುದು. ಭಯ ಉಳ್ಳವರಿಗೆ, ಮಕ್ಕಳಿಗೆ ಹಸುಗೂಸುಗಳಿಗೆ ಬಟ್ಟೆಗಳಿಗೆ ಬೀಗ ಹಾಕಿಸುತ್ತಾರೆ. ಇದನ್ನು ನೆರವೇರಿಸುವ ಭಕ್ತರು ಬೆಳಗಿನಿಂದ ಉಪವಾಸವಿದ್ದು ಹರಕೆ ಮುಗಿದ ಮೇಲೆಯೇ ನೈವೇದ್ಯವಾದ ಮಡೆ ಅನ್ನವನ್ನು ಸ್ವೀಕರಿಸುತ್ತಾರೆ. ತಮಗೆ ಒದಗುವ ಹಲವಾರು ಕಷ್ಟಗಳಿಗೆ ದೇವತೆಯ ಮೊರೆ ಹೋಗಿ, ಹರಕೆಗಳನ್ನು ಹೊರುತ್ತಾರೆ. ಹೊತ್ತ ಹರಕೆಗಳನ್ನು ಜಾತ್ರೆಯ ಸಂದರ್ಭದಲ್ಲಿ ಪೂರೈಸುತ್ತಾರೆ. ನೆರೆಹೊರೆಯ ಗ್ರಾಮಗಳ ಭಕ್ತರು ಕೂಡ ಈ ಕ್ರಿಯಾ ವಿಧಿಯನ್ನು ನೆರವೇರಿಸುತ್ತಾರೆ.

ಬಾಯಿಗೆ ಬೀಗ ಹಾಕಿಸಿಕೊಳ್ಳುವ ಭಕ್ತರು ಬಹಳ ನಿಷ್ಠೆಯ ಭಕ್ತಿಯಿಂದಿದ್ದು ಸುಮಾರು ೧೧ ಗಂಟೆಗೆ ರಾಮಂದಿರದ ಹತ್ತಿರ ೧೦ ರೂ, ೨೦ರೂ, ೫೦ರೂ,ಗಳನ್ನು ಗ್ರಾಮದ ಮುಖಂಡನಿಗೆ ನೀಡಿ ಬೀಗಗಳನ್ನು ತೆಗೆದುಕೊಳ್ಳಬೇಕು. ಅನಂತರ ೧೧–

೩೦ಕ್ಕೆ ದೇವಿಗೆ ಪೂಜೆ ಸಲ್ಲಿಸಲು ತಂಬಿಟ್ಟು, ಬಾಳೆಹಣ್ಣು, ಕಾಯಿ ಹೀಗೆ ಪೂಜಾ ಸಾಮಾನುಗಳನ್ನು ಹೊತ್ತು ಸಾಗುವಾಗ ಅವರ ಜೊತೆಯಲ್ಲಿಯೇ ಪಾವತಿ ಮಾಡಿ ತೆಗೆದುಕೊಂಡ ಬಾಯಿ ಬೀಗಗಳನ್ನು ಗುಡ್ಡಪ್ಪನವರಿಂದ ಹಾಕಿಸಿಕೊಳ್ಳುತ್ತಾರೆ. ಈ ಬೀಗವು ಬೆಳ್ಳಿಯ ತಂತಿಯಿಂದ ಚಚೌಕವಾಗಿದ್ದು ಇದರ ಒಂದು ತುದಿಯು ತೆಳ್ಳಗೆ ಚೂಪಾಗಿರುತ್ತದೆ. ಇನ್ನೊಂದು ತುದಿಯಿಂದ ಭಕ್ತರ ಗಲ್ಲಕ್ಕೆ ಚುಚ್ಚಿ, ಕೊಂಡಿಯಿದ್ದ ತುದಿಗೆ ಸೇರಿಸಿ ಬೀಗ ಹಾಕುತ್ತಾರೆ. ದೇವತೆಯ ಪೂಜೆ ಮುಗಿದ ನಂತರ ಪೂಜಾರಿಯು ಬೀಗವನ್ನು ಕಳೆದು ತನ್ನಲ್ಲಿಯೆ ಇರಿಸಿಕೊಳ್ಳುತ್ತಾನೆ. ಇದೇ ಸಂದರ್ಭದಲ್ಲಿ ಒಳಾಂಗಣದಲ್ಲಿ ಸಾಲಾಗಿ ಪೂಜೆ ಸಲ್ಲಿಸುವವರ ಸಾಲು ಇದ್ದು ದೇವಿಗೆ ಪೂಜೆ ಸಲ್ಲಿಸುತ್ತಾರೆ.

**ಮಡೆ ಹುಯ್ಯುವುದು**

ಮಡೆ ಹುಯ್ಯುವ ಕ್ರಿಯಾ ವಿಧಿಯು ದೇವಿಯ ಮತ್ತೊಂದು ಜಾತ್ರಾ ವಿಶೇಷವಾಗಿದೆ. ಈ ಕ್ರಿಯಾ ವಿಧಿಯನ್ನು ಗ್ರಾಮದವರು ಮಾತ್ರವಲ್ಲದೆ ನೆರೆಯ ಹಳ್ಳಿಗಳಾದ ಹೊಸುಂಡಿ, ಗುಡುಮಾದನಹಳ್ಳಿ, ಹಡಜನ, ಮಾಕನುಂಡಿ, ಚಾಮುಂಡಿ ಬೆಟ್ಟದ ಬ್ರಾಹ್ಮಣೇತರ ಭಕ್ತರು ನೆರವೇರಿಸುತ್ತಾರೆ. ಬ್ರಾಹ್ಮಣೇತರರಲ್ಲಿಯೂ ಸಾಮಾನ್ಯವಾಗಿ ಶಿವಾರ್ಚಕರು ಹಾಗೂ ಲಿಂಗಾಯಿತರು ಈ ಕ್ರಿಯಾ ವಿಧಿಯನ್ನು ಆಚರಿಸುವುದಿಲ್ಲ. ಇದು ಮಧ್ಯಾಹ್ನ ೨–೩೦ಕ್ಕೆ ಸರಿಯಾಗಿ ದೇವಾಲಯದ ಹೊರ ಭಾಗದ ಪ್ರಶಸ್ತವಾದ ದಿಣ್ಣೆಯ ಮೇಲೆ ಒಲೆಗಳನ್ನು ಸಾಲು ಸಾಲಾಗಿ ಮೂರು ಕಲ್ಲುಗಳನ್ನು ಇಟ್ಟು ನಿರ್ಮಿಸುತ್ತಾರೆ. ಇದಕ್ಕೆ ಮೊದಲು ಬೆಳಿಗ್ಗೆಯೆ ಇದು 'ನಮ್ಮದು ಒಲೆ' ಎಂದು ಬೂದಿಯನ್ನು ಕೆರೆದು ಗುರುತು ಮಾಡಿ ಹೋಗಿರುತ್ತಾರೆ. ಮಡೆಯ ಪೂರ್ವ ತಯಾರಿಯಾಗಿ ಒಂದು ಪಿಂಡಿ ಸೌದೆ ಕಟ್ಟಿಕೊಂಡು ಒಂದು ಪಾತ್ರೆಯಲ್ಲಿ ನೀರು, ಅಕ್ಕಿಯನ್ನು ಹಾಕಿ ಸಿದ್ದಗೊಳಿಸಿಕೊಂಡು ಎಲ್ಲರು ಸಾಲಾಗಿ ತಲೆಯ ಮೇಲೆ ಪಾತ್ರೆಯನ್ನು ಹೊತ್ತು ತಂದು ಮೊದಲೇ ನಿರ್ಮಿಸಿದ ಒಲೆಯ ಮೇಲಿಟ್ಟು ಬೆಂಕಿ ಮಾಡಿ ನೈವೇದ್ಯ ತಯಾರಿಸುತ್ತಾರೆ. ತಯಾರಿ ಆದ ನೈವೇದ್ಯಕ್ಕೆ ತೀರ್ಥವನ್ನು ದೇವಸ್ಥಾನದ ಅರ್ಚಕರು ಪ್ರೋಕ್ಷಿಸುತ್ತಾರೆ. ಈ ಕ್ರಿಯಾವಿಧಿಗೆ ಮಡೆ ಹುಯ್ಯುವುದು ಅಥವಾ ವಿಧಿವಹಿತ ಅಡಿಗೆ ಮಾಡುವುದು ಎಂಬ ಹೆಸರು. ಮಡೆ ಸಿದ್ದವಾದ ಬಳಿಕೆ ಮಹಿಳೆಯರು ಮತ್ತು ಪುರುಷರು ನೈವೇದ್ಯದೊಡಗೂಡಿದ ಪಾತ್ರೆಯನ್ನು ತಲೆಯ ಮೇಲೆ ಹೊತ್ತುಕೊಂಡು ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ. ಮನೆಗೆ ತರುತ್ತಿದ್ದಂತೆ ಬಾಗಿಲ ಹೊರಗೆ ನಿಲ್ಲಿಸಿ ಪಾದವನ್ನು ತೊಳೆದು ಮಡೆಯನ್ನು ಒಳಕ್ಕೆ ತರುತ್ತಾರೆ. ಮತ್ತೆ

ನೈವೇದ್ಯಕ್ಕೆ ಗಂಧದಕಡ್ಡಿ ಹಚ್ಚಿ ಪೂಜೆ ಸಲ್ಲಿಸಿ ಬಂದ ನಂಟರಿಷ್ಟರು, ಮನೆ ಮಂದಿಗಳೆಲ್ಲರು ಪ್ರಸಾದವೆಂದು ಸ್ವೀಕರಿಸುತ್ತಾರೆ. ಈ ನೈವೇದ್ಯ ಅನ್ನಕ್ಕಾಗಿ ಮನೆಯಲ್ಲಿ ಸಾಂಬಾರು ಮಾಡಿ ಜೊತೆಗೆ ಹಪ್ಪಳ, ಸೆಂಡಿಗೆ, ಚಕ್ಕುಲಿಯನ್ನು ಉಣಬಡಿಸುತ್ತಾರೆ. ಇಲ್ಲಿಗೆ ಈ ಕ್ರಿಯಾವಿಧಿಯು ಕೊನೆಗೊಳ್ಳುತ್ತದೆ.

ಸಂಜೆ ಜಾತ್ರೆಯ ವಿಶೇಷವಾಗಿ ಮನರಂಜನ ಕಾರ್ಯವನ್ನು ಗ್ರಾಮದ ಸಂಘಗಳಾದ, ಕನಕದಾಸ ಯುವಕರ ಬಳಗ, ಸಂಗೊಳ್ಳಿರಾಯಣ್ಣ ಬಳಗ, ವಿಷ್ಣು ಸೇನಾ ಯುವಕರ ಬಳಗ 'ರಸ ಮಂಜರಿ' ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಮತ್ತೊಂದು ಕಡೆ ನಾಟಕವನ್ನು ಅಂದರೆ ಸಾಮಾಜಿಕವಾಗಿರಬಹುದು ಅಥವಾ ಪೌರಾಣಿಕವಾಗಿರಬಹುದು ವೇದಿಕೆ ಸಿದ್ದಗೊಳಿಸಿ ಗ್ರಾಮದವರು ತಮಗೆ ಬೇಕಾದ ಪಾತ್ರಗಳನ್ನು ಆರಿಸಿಕೊಂಡು ನಟಿಸಿ ಜಾತ್ರೆಗೆ ಆಗಮಿಸಿದ ಜನರ ಮನ ತಣಿಸುತ್ತಾರೆ.

ಜಾತ್ರೆಯ ವಿಶೇಷವಾಗಿ ಹಲವಾರು ರೀತಿಯ ಅಂಗಡೆ ಮುಂಗಟ್ಟುಗಳು ಜಾತ್ರೆಯ ಹಿಂದಿನ ೩, ೪ ದಿನಗಳ ಹಿಂದೆಯೆ ದೇವಾಲಯದ ಎರಡು ಕಡೆಯ ವಿಶಾಲ ಪ್ರದೇಶದಲ್ಲಿ ಟೆಂಟುಗಳನ್ನು ಹಾಕಿಕೊಂಡು ವ್ಯಾಪಾರದಲ್ಲಿ ತೊಡಗುತ್ತಾರೆ. ಪ್ರಮುಖವಾದ ಅಂಗಡಿಗಳೆಂದರೆ

ಪೂಜಾ ಸಾಮಾನು, ಕಡ್ಲೆಪುರಿ, ಸಿಹಿ ತಿಂಡಿಗಳು, ಬಳೆ ಮಾರುವ, ದಿಡೀರ್ ಆಹಾರ ನೀಡುವ, ಐಸ್‌ಕ್ರೀಂ, ಅಚ್ಚೆ ಹಾಕುವ, ಪಾನಿಪುರಿ, ವಿವಿಧ ಆಟಿಕೆ ಅಂಗಡಿಗಳು ತಂಪು ಪಾನೀಯ, ವಿವಿಧ ರೀತಿಯ ಹಣ್ಣನ್ನು ಮಾರುವ ಅಂಗಡಿಗಳು, ಉಯ್ಯಾಲೆಯು ಬಂದಿರುತ್ತದೆ. ಗ್ರಾಮದವರು ತಮ್ಮಲ್ಲಿದ್ದ ಹಣದಿಂದ ಇವುಗಳನ್ನು ಕೊಳ್ಳುವ, ಕೊಂಡು ಸಂತೋಷನವನ್ನು, ಮನರಂಜನೆಯನ್ನು ಹೊಂದುತ್ತಾರೆ.

ಧಾರ್ಮಿಕ ಹಿನ್ನೆಲೆಯಲ್ಲಿ ಜರುಗುವ ಯಾವುದೇ ಜಾತ್ರೆ ಮೂರರಿಂದ ಹನ್ನೊಂದು ದಿನಗಳವರೆಗೆ ಮುಂದುವರೆದುಕೊಂಡು ಹೋದರೂ ಮೊದಲಿನ ಮೂರು ದಿನಗಳಲ್ಲಿ ವಿಶೇಷ ಕಾರ್ಯಕ್ರಮಗಳಿರುತ್ತವೆ. ಈ ಸಂಬಂಧವಾಗಿ ಜಾತ್ರೆಗಳನ್ನು ವ್ಯವಸ್ಥೆಗೊಳಿಸಿದ ಮಠ ಇಲ್ಲದೆ ದೇವಸ್ಥಾನದ ಆಡಳಿತವರ್ಗದಿಂದ ಕರಪತ್ರಗಳನ್ನು ಹೊರಡಿಸಲಾಗಿರುವುದಲ್ಲದೆ ಕಾರ್ಯಕ್ರಮಗಳ ಕುರಿತ ವಿವರಗಳನ್ನು ಪತ್ರಿಕೆಗಳಲ್ಲಿ ಜಾಹೀರಾತು ಮಾಡಲಾಗುತ್ತದೆ. ಜಾತ್ರೆಗೆ ಇನ್ನೂ ಒಂದು ವಾರ ಇರುವಂತೆ ಮನೆಗಳನ್ನು ಸುಣ್ಣಬಣ್ಣಗಳಿಂದ ಅಲಂಕಾರ ಮಾಡುತ್ತಾರೆ. ಈ ಅವಧಿಯಲ್ಲಿ ಶುಕ್ರವಾರದಂದು ಈ ದೇವತೆಯನ್ನು ಮನೆದೇವರಾಗಿ ಸ್ವೀಕರಿಸಿದ ಒಕ್ಕಲುಗಳು ಮತ್ತು

ಜಾತ್ರೆಯನ್ನು ಸಕ್ರಿಯವಾಗಿ ಆಚರಿಸುವ ಜನರೆಲ್ಲರೂ ಮೆಣಸಿನಕಾಯಿ ಹುರಿಯುವುದಿಲ್ಲ. ಉಪ್ಪಿಟ್ಟು, ದೋಸೆ, ಮೆಣಸಿನಪುಡಿ, ವಗ್ಗರಣೆ ಮುಂತಾದ ಕಕ್ಕಲು ಆಗುವ ಪದಾರ್ಥಗಳನ್ನು ಮಾಡುವುದಿಲ್ಲ. ಬಹಳ ಕಟ್ಟು ನಿಟ್ಟಿನಿಂದ ಈ ಆಚರಣೆಯನ್ನು ಪಾಲಿಸುತ್ತಾರೆ. ಹಿಂದೆ ಈ ಆಚರಣೆಯನ್ನು ಐದು ದಿವಸಗಳು ಮಾಡುತ್ತಿದ್ದರು. ಈಗ ಮೂರು ದಿವಸಗಳಿಗೆ ಇಳಿದಿದೆ.

ಭಾನುವಾರ ಬೆಳಿಗ್ಗೆ ದೇವಸ್ಥಾನವನ್ನು ಅಲಂಕಾರ ಮಾಡಿ ದೇವಿಗೆ ಚಿನ್ನದ ಆಭರಣ ಮತ್ತು ಹೂವಿನಿಂದ ಅಲಂಕರಿಸುತ್ತಾರೆ. ಅಂದು ಬೆಳಗಿನ ಜಾವದಲ್ಲಿ ಹೋಮವನ್ನು ಸುಡುವುದರ ಮೂಲಕ ಜಾತ್ರೆಯು ಆರಂಭವಾಗುತ್ತದೆ. ಈ ಸಮಯದಲ್ಲಿ ಭಾಗವಹಿಸಿದ ಸಾವಿರಾರು ಭಕ್ತರಿಗೆ ಇಲಾಖೆಯ ವತಿಯಿಂದ ಅಥವಾ ಭಕ್ತರ ವತಿಯಿಂದ ಅನ್ನಸಂತರ್ಪಣೆ ನಡೆಯುತ್ತದೆ. ಸಾಯಂಕಾಲ ಈ ದೇವಿಯನ್ನು ಪೂಜಿಸುವ ಲಿಂಗಾಯಿತರ ಮನೆಯಲ್ಲಿ ಕಳಸ ಪ್ರತಿಷ್ಠಾಪನೆ ಮಾಡಿ ಅಲ್ಲಿಂದ ಪೊಲೀಸರ ಕಾವಲಿನಲ್ಲಿ ಇನ್ನೂ ಪ್ರೌಢಾವಸ್ಥೆಗೆ ಬರದ ಲಿಂಗಾಯಿತ ಹೆಣ್ಣುಮಕ್ಕಳ ಕೈಯಲ್ಲಿ ಹೊರೆಸಿಕೊಂಡು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಯುತ್ತದೆ. ಇದಕ್ಕೆ ಕನ್ನಾ 'ಕನ್ನಡಿ ಉತ್ಸವ' ಎಂದು ಕರೆಯುತ್ತಾರೆ.

ಈ ಸಂದರ್ಭದಲ್ಲಿ ಮಂಗಳವಾದ್ಯ, ಸತ್ತಿಗೆ, ಸೂರಿಪಾನೀ, ಛತ್ರಿ, ಚಾಮರ ಮುಂತಾದ ಬಿರುದುಗಳ ಸಮೇತ ಉತ್ಸವ ನಡೆದು ಕೊನೆಗೆ ದೇವಸ್ಥಾನಕ್ಕೆ ಬರುತ್ತದೆ. ಉತ್ಸವ ನಡೆಯುವಾಗ ಮದ್ದಿನಿಂದ ಮಾಡಿದ ವಿವಿಧ ರೀತಿಯ ಬಾಣ ಬಿರುಸು, ಕುಡಿಕೆ, ಪಟಾಕಿ ಮುಂತಾದವುಗಳನ್ನು ಮನರಂಜಿಸುವ ರೀತಿಯಲ್ಲಿ ಸಿಡಿಸುತ್ತಾರೆ. ಇದಕ್ಕೆ ಊರಿನ ಪ್ರತಿಯೊಂದು ಮನೆಯವರಿಂದ ವಂತಿಗೆಯ ಹಣವನ್ನು ಸಂಗ್ರಹಿಸಲಾಗಿರುತ್ತದೆ.

ಜಾತ್ರೆ ಎಂದಾಕ್ಷಣ ಹತ್ತಾರು ಊರುಗಳ ಜನಜಂಗುಳಿಯ ಸದ್ದುಗದ್ದಲ, ತೇರು ಬಂಡಿಗಳ ಸಡಗರ ತಿಂಡಿತಿನಿಸುಗಳ, ವಸ್ತು ಒಡವೆಗಳ ಸೂರೆ, ಬಣ್ಣಬಣ್ಣದ ಆಟಿಕೆಯ ಸಾಮಾನುಗಳ ರಂಗು ಮುಂತಾದುವುಗಳು ಕಾಣಿಸಿಕೊಳ್ಳುವಂತೆ ಉತ್ತನಹಳ್ಳಿ ಜಾತ್ರೆಯ ಸಂದರ್ಭದಲ್ಲಿಯೂ ಅಂಗಡಿ ಮುಂಗಟ್ಟುಗಳು, ತಿಂಡಿತಿನಿಸು, ಆಟಿಕೆ ಸಾಮಾನುಗಳ ಅಂಗಡಿಗಳು ಬಂದು ಸೇರುತ್ತವೆ. ಜಾತ್ರೆ ನಡೆಯುವ ಸಂದರ್ಭದಲ್ಲಿ ಸಾವಿರಾರು ಭಕ್ತರು ಬಂದು ದೇವಿಯ ದರ್ಶನ ಮಾಡಿ ಪೂಜೆ ಮಾಡಿಸುತ್ತಾರೆ. ಜೊತೆಗೆ ತಮ್ಮ ಕಷ್ಟಗಳನ್ನು ನಿವಾರಿಸಿದ ದೇವಿಗೆ ಹರಕೆಯ ರೂಪದಲ್ಲಿ ಕಾಣಿಕೆಯನ್ನು ಒಪ್ಪಿಸುತ್ತಾರೆ.

ಸೋಮವಾರದಂದು ಹರಿಜನರ ಹೊರತು ಉಳಿದ ಎಲ್ಲಾ ಕೋಮಿನವರು ತಂಬಿಟ್ಟು, ಹಣ್ಣುಕಾಯಿ ಸಮೇತ ಮೆರವಣಿಗೆ ಮೂಲಕ ದೇವರ ಸನ್ನಿಧಾನಕ್ಕೆ ಬಂದು ಪೂಜೆ ಮಾಡಿಸುತ್ತಾರೆ. ಈ ಸಂದರ್ಭದಲ್ಲಿಯೇ ಹರಕೆ ಹೊತ್ತ ಜನರು ತಮ್ಮ ಬಾಯಿಗಳಿಗೆ ಬೀಗ ಹಾಕಿಸಿಕೊಳ್ಳುತ್ತಾರೆ. ಉತ್ತನಹಳ್ಳಿಗೆ ಹೊಂದಿಕೊಂಡಂತೆ ಇರುವ ಎಳಿಗೆ ಹುಂಡಿ ಗ್ರಾಮದಲ್ಲಿಯೂ ಇದೇ ರೀತಿಯಲ್ಲಿ ಮೆರವಣಿಗೆ ನಡೆಯುತ್ತದೆ. ನಂತರ ಪ್ರತಿಯೊಂದು ಮನೆಯವರು ಮಾರಿಗುಡಿಯ ಮುಂದೆ ಸಾಲಾಗಿ ಮಡೆ ಗುಂಡಿಗಳನ್ನು ತೋಡಿರುತ್ತಾರೆ. ಸೋಮವಾರ ಮಧ್ಯಾಹ್ನ ಈ ಮಾರಿಗುಡಿಯ ಮುಂದೆ ಪ್ರತಿಯೊಬ್ಬರು ಮಡೆ ಮಾಡುತ್ತಾರೆ. ನಂತರ ದೇವಸ್ಥಾನದ ಪೂಜಾರಿ ಬಂದು ಪೂಜೆ ಮಾಡಿ ತೀರ್ಥವನ್ನು ಪ್ರೋಕ್ಷಿಸಿದ ಮೇಲೆ ತಮ್ಮ ಮಡೆಗಳನ್ನು ತೆಗೆದುಕೊಂಡು ಅವರವರ ಮನೆಗೆ ತೆರಳುತ್ತಾರೆ.

ಮಂಗಳವಾರ ಬಂದ ಆಪ್ತರೆಲ್ಲರಿಗೂ ಮಾಂಸದ ಭೋಜನ ಮಾಡಿಸುತ್ತಾರೆ. ಈ ಹಬ್ಬದಲ್ಲಿ ದೂರದ ಊರಿನ ನೆಂಟರು, ಹೆಣ್ಣುಮಕ್ಕಳು, ಸ್ನೇಹಿತರು ಒಟ್ಟಾರೆ ಕಲೆತು ಸಂತೋಷದಿಂದ ಆಚರಿಸುತ್ತಾರೆ. ಒಟ್ಟಿನಲ್ಲಿ ಜಾತ್ರೆ ಮತ್ತು ಉತ್ಸವಗಳು ವರ್ಷವೆಲ್ಲಾ ದುಡಿದ ರೈತ ಸಂಕುಲಕ್ಕೆ ಒಂದು ರೀತಿಯ ಮನರಂಜನೆ ಕ್ಷಣಗಳನ್ನು ಈ ದಿನಗಳಲ್ಲಿ ಸಂತೋಷದಿಂದ ಕಳೆಯಲು ಒಂದು ವೇದಿಕೆಯಾಗಿದೆ.

**ಆ) ಕಾರ್ಗಳಮ್ಮನವರ ಉತ್ಸವ:**

ಪ್ರತಿಯೊಂದು ಊರಿನಲ್ಲಿ ಗ್ರಾಮದೇವತೆ ಉಂಟು. ಹಾಗೆಯೇ ಉತ್ತನಹಳ್ಳಿ ಗ್ರಾಮದೇವತೆಯಾದ ಕಾರ್ಗಳಮ್ಮನ ಉತ್ಸವ ದೀಪಾವಳಿ ಮತ್ತು ಯುಗಾದಿ ಹಬ್ಬದಂದು ನಡೆಯುತ್ತದೆ. ದೀಪಾವಳಿಯ ಹಿಂದಿನ ದಿನ ದೇವಸ್ಥಾನವನ್ನು ಸ್ವಚ್ಛಮಾಡಿ ಬಣ್ಣವನ್ನು ಹೊಡೆಸುತ್ತಾರೆ. ಈ ಹಬ್ಬದಂದು ಸಾಯಂಕಾಲ ಕಂಚಿನ ವಿಗ್ರಹಗಳನ್ನು ಗದ್ದುಗೆಗೇರಿಸುತ್ತಾರೆ. ಈ ಅವಧಿಯಲ್ಲಿ ಈ ದೇವತೆಯನ್ನು ಮನೆದೇವರಾಗಿ ಸ್ವೀಕರಿಸಿದ ಒಕ್ಕಲುಗಳು ಮತ್ತು ಈ ಉತ್ಸವದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವವರು. ದೀಪಾವಳಿ ಹಬ್ಬದಂದು ಸಂಜೆ ರಥಕ್ಕೆ ಹೂ ಮತ್ತು ವಿದ್ಯುತ್ ದೀಪಗಳಿಂದ ಅಲಂಕರಿಸಿ ಮೆರವಣಿಗೆಗೆ ಸಿದ್ಧಗೊಳಿಸುತ್ತಾರೆ. ಈ ಸಂದರ್ಭದಲ್ಲಿ ಚಿನ್ನದ ವಿಗ್ರಹವನ್ನು ರಥದಲ್ಲಿ ಕೂರಿಸಿ ಊರಿನ ಪ್ರಮುಖ ಬೀದಿಗಳಲ್ಲಿ ಉತ್ಸವ ಹೊರಡುತ್ತದೆ. ಪಟಾಕಿ ಬಾಣ ಬಿರುಸುಗಳನ್ನು ಸಿಡಿಸುತ್ತಾರೆ. ಈ ದೇವತೆಗೆ ಊರಿನ ಪ್ರತಿಯೊಬ್ಬರು ಪೂಜೆ ಮಾಡಿಸುತ್ತಾರೆ. ಹೀಗೆ ಯುಗಾದಿಯ ಹಬ್ಬದಲ್ಲಿಯೂ ಉತ್ಸವ ನಡೆಯುವ ಮುಂಚೆ

ನಂಜನಗೂಡಿನ ಮಲ್ಲನ ಮೂಲೆಯ ಕಪಿಲ ನದಿಯ ಬಳಿಗೆ ದೇವರ ವಿಗ್ರಹಗಳನ್ನು ಪೆಟ್ಟಿಗೆಯಲ್ಲಿ ಹಾಕಿಕೊಂಡು ಹೊತ್ತಿಕೊಂಡು ನಡೆದು ಹೋಗಿ ವಿಗ್ರಹಗಳಿಗೆ ಮಜ್ಜನ ಮಾಡಿಸಿ, ಹೋಮ ಮಾಡಿಸಿಕೊಂಡು ಕೊನೆಗೆ ದೇವರನ್ನು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ನಂತರ ದೇವಸ್ಥಾನಕ್ಕೆ ತಂದು ಇರಿಸುತ್ತಾರೆ. ಈ ಸಂದರ್ಭದಲ್ಲಿ ಭಕ್ತರು ತಮ್ಮೊಡನೆ ತಂದ ಅಕ್ಕಿ, ಬೆಲ್ಲ ಮುಂತಾದವುಗಳನ್ನು ಅರ್ಚಕರಿಗೆ ಕೊಡುತ್ತಾರೆ. ತಳಿಗೆ ಮಾಡಿ ಮೊದಲು ದೇವರಿಗೆ ನೈವೇದ್ಯ ಮಾಡಿ ನಂತರ ಅಲ್ಲಿ ನೆರೆದಿರುವ ಗ್ರಾಮಸ್ಥರಿಗೆ ಮತ್ತು ಭಕ್ತರಿಗೆ ಪ್ರಸಾದವನ್ನು ಹಂಚುತ್ತಾರೆ.

**ಇ) ಶನಿದೇವರ ಉತ್ಸವ:**

ಪ್ರತಿವರ್ಷ ಶ್ರಾವಣ ಶನಿವಾರದಂದು ನಡೆಯುವ ಈ ಉತ್ಸವದಲ್ಲಿ ಶನಿದೇವರ ವಿಗ್ರಹವನ್ನು ಅಲಂಕಾರ ಮಾಡಿ ಮಂಗಳವಾದ್ಯಗಳೊಡನೆ, ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಯುವ ಸಂದರ್ಭದಲ್ಲಿ ಗ್ರಾಮಸ್ಥರೆಲ್ಲರೂ ಪೂಜೆ ಮಾಡಿಸುತ್ತಾರೆ. ಈ ಉತ್ಸವದಲ್ಲಿ ಪಾಲ್ಗೊಂಡ ನೂರಾರು ಭಕ್ತರಿಗೆ ಮತ್ತು ಗ್ರಾಮಸ್ಥರಿಗೆ ಪ್ರಸಾದ ಹಂಚುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಈ ದೇವಸ್ಥಾನದಲ್ಲಿ ಅನ್ನಸಂತರ್ಪಣೆ ನಡೆಯುತ್ತಿದೆ. ಒಂದೇ ದಿನದಲ್ಲಿ ನಡೆಯುವ ಈ ಉತ್ಸವದಲ್ಲಿ ನೂರಾರು ಭಕ್ತರು ಭಾಗವಹಿಸಿ ಶನಿದೇವರ ದರ್ಶನವನ್ನು ಮಾಡುತ್ತಾರೆ.

ಹೀಗೆ ಜಾತ್ರೆಗಳು ಮತ್ತು ಉತ್ಸವಗಳು ಎಲ್ಲರೂ ಒಟ್ಟಾಗಿ ಕಲೆಯಲು ವೇದಿಕೆಯಾಗಿವೆ. ಕೇವಲ ಸಂಪ್ರದಾಯ ಆಚರಣೆ ಆಗದೆ ಸಂತೋಷಕೂಟದಂತೆ ಕಂಡುಬರುತ್ತದೆ. ವರ್ಷವಿಡಿ ದುಡಿದ ಕೆಲವರ್ಗದ ಶ್ರಮಿಕರು ಕೆಲವು ಸಮಯಗಳನ್ನು ಸಂತೋಷದಿಂದ ಕಳೆಯಲು ಅವಕಾಶ ಮಾಡಿಕೊಟ್ಟಿವೆ. ಜಾತ್ರೆಗಳು ಕೇವಲ ಮನೋರಂಜನೆಗಲ್ಲದೆ ಇತರ ಕೆಲ ಪ್ರದರ್ಶನಗಳು ನಡೆಯುತ್ತವೆ. ನಮ್ಮ ಜನಪದರು ಎಷ್ಟು ಶಕ್ತಿಶಾಲಿಗಳು ಮತ್ತು ಧೈರ್ಯಶಾಲಿಗಳು ಎಂಬುದನ್ನು ಪ್ರದರ್ಶಿಸಲು ಹಲವಾರು ಸ್ಪರ್ಧೆಗಳು ಜಾತ್ರೆ ಮತ್ತು ಉತ್ಸವಗಳ ಸಮಯದಲ್ಲಿ ನಡೆಯುತ್ತವೆ. ಅವುಗಳಲ್ಲಿ ಗುಂಡು ಎತ್ತುವುದು, ಗಾಡಿ ಓಡಿಸುವುದು. ಇವುಗಳ ಜೊತೆಗೆ ಕೆಲವು ಜನಪದ ಕಲಾತಂಡಗಳು ಸಹ ಇಂತಹ ಸಂದರ್ಭದಲ್ಲಿ ತಮ್ಮ ಪ್ರತಿಭೆಯನ್ನು ಪ್ರದರ್ಶಿಸುತ್ತಾರೆ.

**ಅಡಿಟಿಪ್ಪಣಿ**

೧. ದೇ.ಜವರೇಗೌಡ, ಜಾನಪದ ಅಧ್ಯಯನ, ಪುಟಸಂಖ್ಯೆ ೫೩.

೨. ಸಿ.ಎಸ್.ಶಿವಕುಮಾರಸ್ವಾಮಿ, ಕರ್ನಾಟಕದ ಜಾತ್ರೆಗಳು, ಪುಟಸಂಖ್ಯೆ ೩.

೩. ಅಂಬಳಿಕೆ ಹಿರಿಯಣ್ಣ, ಜಾನಪದ ವೀಕ್ಷಣೆ ಪುಟಸಂಖ್ಯೆ ೨೧.

## ಅಧ್ಯಾಯ - ೬

# ಉತ್ತನಹಳ್ಳಿಯ ಸಾಂಸ್ಕೃತಿಕ ಹಿನ್ನೆಲೆ

ಮಾನವ ಸಂಘಜೀವಿಯಾಗಿದ್ದು ಅವನು ಏಕಾಂಗಿಯಾಗಿ ಬದುಕಲಾರ. ಅವನು ಕುಟುಂಬ, ಸಮಾಜ ಹಾಗೂ ಧರ್ಮಗಳಿಗೆ ಗೌರವಕೊಟ್ಟು ಬದುಕ-ಬೇಕಾಗುತ್ತದೆ. ಸಾಂಸ್ಕೃತಿಕವಾಗಿ ಪ್ರತಿಯೊಂದು ಹಳ್ಳಿ ಹಳ್ಳಿಯಲ್ಲೂ ಕೆಲವು ಹಾಡು, ಕುಣಿತ, ಆಟ, ಜನಪದ ವೈದ್ಯ ಮುಂತಾದವುಗಳು ಕಂಡುಬರುತ್ತವೆ. ಹಿಂದೆ ವರ್ಷವಿಡೀ ಬೇಸಾಯ ಕಾರ್ಯಗಳಲ್ಲಿ ತೊಡಗಿದ್ದ ರೈತರು ತಮ್ಮ ಬೇಸರಿಕೆ ಮತ್ತು ಕೆಲಸದ ಒತ್ತಡವನ್ನು ನಿವಾರಿಸಿಕೊಳ್ಳಲು ಕೆಲವು ಜನಪದ ಹಾಡು, ಗಾದೆ, ಒಗಟುಗಳನ್ನು ಕೆಲಸದ ಜೊತೆಯಲ್ಲಿಯೇ ಹಾಡುತ್ತಾ ಬಂದಿರುವುದನ್ನು ಕಾಣಬಹುದಾಗಿದೆ.



**೧) ಜನಪದ ಕಲೆಗಳು:**

ಮೈಸೂರು ಜಿಲ್ಲೆಯ ಇತರ ಪ್ರದೇಶಗಳಿಗೆ ಹೋಲಿಸಿದರೆ ಮೈಸೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳು ಸಹ ಜನಪದಕಲೆಗಳನ್ನು ಪೋಷಿಸಿಕೊಂಡು ಬರುವಲ್ಲಿ ಯಶಸ್ವಿಯಾಗಿದೆ. ಇಲ್ಲಿಯ ಗ್ರಾಮಗಳಲ್ಲಿ ಇಂದಿಗೂ ಈ ಕಲೆಗಳು ಜೀವಂತವಾಗಿವೆ. ಅವುಗಳಲ್ಲಿ ಕೋಲಾಟ, ಗಾರುಡಿಗೊಂಬೆ, ಈರಮಕ್ಕಳ ಕುಣಿತ, ಬೀಸುಕಂಸಾಳೆ ಕುಣಿತ ವೀರಗಾಸೆ ಮತ್ತು ಬೀರದೇವರ ಕುಣಿತ ಮುಖ್ಯವಾದವು. ಇವುಗಳಲ್ಲಿ ಕೋಲಾಟ ಮತ್ತು ಗಾರುಡಿಗೊಂಬೆ ಕುಣಿತಗಳನ್ನು ಹೊರತುಪಡಿಸಿದರೆ ಉಳಿದವೆಲ್ಲವು ಧಾರ್ಮಿಕ ಹಿನ್ನೆಲೆಯನ್ನು ಹೊಂದಿರುವ ಕಲೆಗಳೇ ಆಗಿವೆ. ಹಬ್ಬ, ಜಾತ್ರೆ, ಉತ್ಸವ, ಸಮಾರಾಧನೆಗಳು ಇಲ್ಲಿಯ ಕಲೆಗಳನ್ನು ಪೋಷಿಸಿಕೊಂಡು ಬರುತ್ತಿರುವುದು ಕೂಡ ಗಮನಿಸಬೇಕಾದ ಇನ್ನೊಂದು ಮುಖ್ಯಸಂಗತಿಯಾಗಿದೆ. ಕಲೆಗಳು ಲೌಕಿಕ ಸ್ವರೂಪದ್ದಾಗಿರಲಿ, ಧಾರ್ಮಿಕವಾಗಿರಲಿ ಗ್ರಾಮದೇವತೆ, ಕ್ಷೇತ್ರ ದೇವತೆ, ಕುಲದೇವತೆ, ಮನದೇವತೆಗಳಿಗೆ ಸಂಬಂಧಿಸಿದಂತೆ ಆಚರಿಸುವ ಹಬ್ಬ ಸಂದರ್ಭಗಳಲ್ಲಿ ಹೆಚ್ಚಾಗಿ ಇವು ಪ್ರದರ್ಶಿತವಾಗುತ್ತಿರುವುದನ್ನು ಕಾಣಬಹುದಾಗಿದೆ. ಅಂತೆಯೇ ಉತ್ತನಹಳ್ಳಿ ಗ್ರಾಮದಲ್ಲಿಯೂ ಕೆಲವು ಕಲೆಗಳು ಕಂಡುಬರುತ್ತಿವೆ.

**ಅ) ಒಗಟು:** ವಾಕ್ಸಂಪ್ರದಾಯದ ಹಲವು ಪ್ರಕಾರಗಳಲ್ಲಿ ಜನಸಾಮಾನ್ಯರ ಊಹಾ ಶಕ್ತಿಗೆ ಕನ್ನಡಿ ಹಿಡಿಯುವ ಅತ್ಯುತ್ತಮ ಪ್ರಕಾರಗಳೆಂದರೆ ಒಗಟು. ಒಗಟುಗಳು ಬುದ್ಧಿ

ಪ್ರಧಾನವಾದವುಗಳು. ಇವು ಸಾಮಾನ್ಯವಾಗಿ ಊಹೆಯ ಮೇಲೆ ಉತ್ತರವನ್ನು ಹುಡುಕುವ, ಕೇಳಿದ ಕೂಡಲೆ ದಿಗ್ಭ್ರಮೆ ಹಿಡಿಸುವ, ರಹಸ್ಯಾರ್ಥವುಳ್ಳ ಪ್ರಶ್ನಾರ್ಥಕ ಹೇಳಿಕೆಗಳು. ಪ್ರತಿಯೊಂದರಲ್ಲೂ ಸಮಸ್ಯೆಯೊಂದಿದು, ಸುಲಭವಾಗಿ ಬಿಡಿಸಲಾರದ ರೀತಿಯಲ್ಲಿ ಸಂಯೋಜಿತವಾಗಿರುತ್ತದೆ. ಇದರಲ್ಲಿ ಒಡ್ಡಿದ್ದು ಒಂದಿದರೆ, ಒಡೆಸುವುದು ಮತ್ತೊಂದು ಇರುತ್ತದೆ. ಗುಪ್ತವಾಗಿರುವ ಮೊದಲನೆಯದನ್ನೆ ಎರಡನೆಯದು ವ್ಯಕ್ತಗೊಳಿಸಬೇಕಾಗುತ್ತದೆ. ಹೀಗಾಗಿ ಒಗಟಿನ ಪ್ರಧಾನವಾದ ಲಕ್ಷಣವೊಂದೆಂದರೆ ಅರ್ಥಗೋಪದ ಕ್ರಿಯೆ. ವಾಸ್ತವ ಅರ್ಥವನ್ನು ಮುಚ್ಚಿಡುವ ರೀತಿಯೇ ಇದು. ಇದರಲ್ಲಿ ಮೊದಲು ಗಮನಕ್ಕೆ ಬರುವುದು ಪ್ರಶನೆ, ಎರಡನೆಯದಾಗಿ ನಿಲ್ಲುವುದು ಉತ್ತರ. ಪ್ರಶ್ನೆಯಲ್ಲಿ ಸಂಗತಿರೂಪಕದ ರೂಪದಲ್ಲಿ ಗೋಪ್ಯವಾಗಿದ್ದು ಹೀಗೆ ಗೋಪನಗೊಂಡ ಅರ್ಥ ಉತ್ತರದಲ್ಲಿ ಪ್ರಕಾಶನಗೊಂಡಾಗ ನಿಯೋಜಿತ ಉದ್ದೇಶಪೂರ್ಣವಾಗಿ ವ್ಯಕ್ತಗೊಳ್ಳುತ್ತದೆ.

ಒಗಟಿನ ಆಸಕ್ತಿ ಮೂಲಭೂತವಾದುದ್ದು. ಪ್ರಾಚೀನ ಕಾಲದಿಂದಲೂ ಬಂದ ಒಂದು ಆಕರ್ಷಕ ಚಟುವಟಿಕೆ. ಒಗಟುಗಳು ಶೈಕ್ಷಣಿಕ ಹಾಗೂ ಮನೋರಂಜಕ ಲಕ್ಷಣಗಳೆರಡನ್ನು ಹೊಂದಿವೆ. ಯುವಕರು ಮನೋರಂಜನೆಗಾಗಿ ಒಗಟುಗಳನ್ನು ಪ್ರೀತಿಸಿದರೆ, ಮುದುಕರು ಅವುಗಳು ಬೋಧನಾತ್ಮಕ ಲಕ್ಷಣಗಳನ್ನು ಗಮನಿಸುತ್ತಾರೆ. ಒಗಟುಗಳ ವೈವಿಧ್ಯಪೂರ್ಣವಾದ ವಸ್ತುವಿನಲ್ಲಿ ಮತ್ತು ರೂಪದಲ್ಲಿ ಈ ಎರಡು ವಿಚಾರಗಳು ಪ್ರತಿಬಿಂಬಿತವಾಗಿವೆ. ಈ ಶೈಕ್ಷಣಿಕ ಹಾಗೂ ಮನೋರಂಜಕ ಗುಣಗಳಿಂದಾಗಿಯೇ ಒಗಟುಗಳು ಸಾಮಾಜಿಕ ಮಹತ್ವವನ್ನು ಪಡೆದುಕೊಂಡಿವೆ. ಇದರಿಂದ ಅನೇಕ ಬುಡಕಟ್ಟುಗಳಲ್ಲಿ ನಿಷಿದ್ಧತೆಗಳು ಅವುಗಳ ಉಪಯೋಗದೊಡನೆ ಸೇರಿಕೊಳ್ಳಲು ಕಾರಣವಾಗಿದೆ.

**ಒಗಟುಗಳ ಲಕ್ಷಣಗಳು**

- ಒಗಟು ಜನಸಾಮಾನ್ಯರ ಊಹನಾಶಕ್ತಿಯ ಕನ್ನಡಿ
- ಒಡ್ಕವ – ಬಿಡಿಸುವ ಒಂದು ಸಂತೋಷದ ಕ್ರಿಯೆ ಒಗಟು
- ಒಗಟು ಒಂದು ಶಾಬ್ದಿಕ ಸಂಕೇತ
- ಅನುಕ್ಷ ವಸ್ತುವಿನ ಅರ್ಥವಿಶದತೆಯ ಪ್ರತಿಪಾದನೆ ಒಗಟು
- ರೂಪಕಗಳ ಸರಣಿಯೇ ಒಗಟು

- ಒಗಟುಗಳಲ್ಲಿ ಬುದ್ಧಿಯ ಕಸರತ್ತೇ ಪ್ರಧಾನ
- ಒಗಟು ಹಾಸ್ಯದ ಪ್ರಕೃತಿ ಸಾದೃಶ್ಯದ ಫಲ
- ಒಗಟು ಅದರ ನಿಜವಾದ ಅರ್ಥದಲ್ಲಿ ಜನವಾಣಿ
- ಒಗಟು ಒಂದು ಕಾವ್ಯಕಲೆ

ಪುರಾತನ ಮಾನವ ತನ್ನ ಭಾವೋದ್ಗಾರಗಳಿಗೆ ಪ್ರಪ್ರಥಮವಾಗಿ ಗವಾಕ್ಷವನ್ನು ಕೊರೆದದ್ದು ಜನಪದ ಸಾಹಿತ್ಯದ ಮೂಲಕವೇ. ಮನುಷ್ಯ ಭೂಮಿಯ ಮೇಲೆ ಪಾದಾರ್ಪಣೆ ಮಾಡಿದಂದಿನಿಂದಲೇ ಇದರ ಉದಯವಾಗಿದ್ದರೂ ಕ್ರಮೇಣ ತನ್ನ ಸ್ಪಷ್ಟರೂಪವನ್ನು ಪಡೆದಿರಬೇಕೆಂದು ತೋರುತ್ತದೆ. ವ್ಯಷ್ಟಿರೂಪದ ಸಾಹಿತ್ಯಕ್ಕೆ ಈ ಸಮಷ್ಟಿರೂಪದ ಸಾಹಿತ್ಯವೇ ಮೂಲ ಹಾಗೂ ಪ್ರೇರಕ. ಹೀಗೆ ಆದಿವಾಸಿ ಕಂಡುಕೊಂಡ ಅಭಿವ್ಯಕ್ತಿಯ ಹಲವು ಪ್ರಕಾರಗಳಲ್ಲಿ ಒಗಟೂ ಒಂದು ಮೂಲಭೂತವಾಗಿ ಸೃಷ್ಟಿಯೇ ಒಂದು ಪ್ರಶ್ನೆ, ಜೀವನವೇ ಒಂದು ಅರ್ಥವತ್ತಾದ ಸಮಸ್ಯೆ ಎಂಬ ಸಾಂಕೇತಿಕ ದೃಷ್ಟಿಯ ಹಿನ್ನಲೆಯಲ್ಲಿ ರಚಿತವಾಗಿರುವಂತೆ ತೋರುತ್ತದೆ. ಸಾಮಾನ್ಯವಾಗಿ ಒಗಟುಗಳು ಪ್ರತಿ ಹಳ್ಳಿಯಲ್ಲಿಯೂ ಹೆಂಗಸರೆನ್ನದೆ, ಮಕ್ಕಳೆನ್ನದೆ ಗಂಡಸರೆನ್ನದೆ ಎಲ್ಲರಲ್ಲಿಯೂ ದೊರೆಯುತ್ತದೆ. ಅಬಾಲವೃದ್ಧರಾದಿಯಾಗಿ ಸರ್ವರಿಗೂ ರಂಜನೆ ನೀಡಿದೆ. ಒಗಟು ಹಳ್ಳಿಯ ಬಾಳಿನ ಸಾರಿಗೆ ಹಾಕಿದ ಒಗ್ಗರಣೆ, ಹಾರಿತಿದ ಚಟಾಕಿ ಜೀವನವೇ ಅವರ ಪರಿಕರ. ಆದರೆ ಜೀವನದಷ್ಟೆ ಅದು ಗೂಢತರ. ಜಗತ್ತಿನ ಎಲ್ಲಾ ಕಡೆಗಳಲ್ಲೂ ಸಾರ್ವತ್ರಿಕವಾಗಿ ಹರಡಿಕೊಂಡಿರುವ ಇದು ಜನಾಂಗವೊಂದರ ಭಾಷೆ, ಸಂಸ್ಕೃತಿ ಹಾಗೂ ಸಾಹಿತ್ಯಗಳ ಮುಪ್ಪುರಿಯಾಗಿದೆ. ಜನತೆಯ ಬುದ್ಧಿ ವೈಭವ, ಹಾಸ್ಯ ಪ್ರಿಯತೆ, ಚತುರೋಕ್ತಿ, ವಿಡಂಬನ ಸ್ವಭಾವ, ಭೋದನ ಮನೋಧರ್ಮ ಇದನ್ನು ಚಿತ್ರಿಸಲು ಪ್ರಯತ್ನಿಸುತ್ತದೆ ಒಗಟು.

(೯) ಬೆಟ್‌ಗಾತ್ರ ಇದೆ
ಬೆಟ್ಟುದ್ದ ಇದೆ
ಹಿಂದಗಡೆ ತೊಟ್ಟು
ಮುಂದಗಡೆ ಮೂಕು
ಒಳಗಡೆ ನೋಡಿದ್ರೆ
ದುಂಡಗೆ ಕಾಳು

(ತೊಗರಿಕಾಯಿ)

(೧೦) ಬೆಳಗಾನ ಮಲಗಿರುತ್ತದೆ, ಬೆಳಗಾಯ್ತು ಎದ್ದೆ ನಿಂತ್ಕೊಳ್ತದೆ

(ಪೊರಕೆ)

(೧೧) ಬಂಗಾರದ ಕೊಳದಲ್ಲಿ
ಸಿಂಗಾರದ ಗಿಣಿಹೋಗಿ
ಬಾಯಲ್ಲಿ ಮುತ್ತು ಕಟ್ಟಿಕೊಂಡು
ಪುಕ್ಕದಲ್ಲಿ ನೀರು ಕುಡೀತದೆ

(ಸೀಮೆಎಣ್ಣೆ ಬುಟ್ಟಿ)

(೧೨) ಬಳೇಕಪ್ಪೆ
ಹೊಟ್ಟೆಯೊಳಗೆ ಕರಿಮರಳು

(ಕರ್ಜಿಕಾಯಿ)

(೧೩) ಬಿಳಿ ಹೊಲ
ಕರಿಬಿತ್ತನೆ
ಕೈಯಲ್ಲಿ ಚೆಲ್ಲೋದು
ಬಾಯಲ್ಲಿ ಆಯೋದು

(ಪುಸ್ತಕ – ಅಕ್ಷರ)

(೧೪) ಬಡವರೆಲ್ಲಾ ಬಿಸ್ಹಾಕ್ತಾರೆ
ಪುಣ್ಯವಂತರೆಲ್ಲಾ ಮಡಿಕೊಳ್ತಾರೆ

(ಸಿಂಬಲ – ಗೊಣ್ಣೆ)

(೧೫) ಚಿಕ್ಕಪೆಟ್ಟಿಗೇಲಿ ಚೊಕ್ಕ ಚಿನ್ನ

(ಹಲಸಿನ ತೊಳೆ)

(೧೬) ಮೋಟ್ ಹುಣಸೆಮರದ್ಮೇಲೆ
ದೀಪ ಬರೀತದೆ

(ಮೂಗ್ಬಟ್ಟು)

(೧೭) ಮಾಣ್ ಮಾಣ್‌ಗಾರ
ಮೆಣಸಿನಕಾರ
ಇಲ್ಲಿಗೆ ಹೋಗಿದ್ದೆ

ರಾಜರ ಬೀದಿಗೆ
ಅವರು ಅಳ್ತಾ ಇದ್ರು
ನಾನು ಓಡ್ಬಂದೆ

(ಚೇಳು)

(೧೮) ಮೋಸಗಾರ ಒಬ್ಬ
ಹಟಗಾರ ಒಬ್ಬ
ನಿಜಗಾರ ಒಬ್ಬ

(ತಿಗಣೆ, ನೊಣ, ಸೊಳ್ಳೆ)

(೧೯) ನೋಡಿದ್ರೆ ನವಿಲುಗರಿ
ಆವ ನೋಡಿದ್ರೆ ನಾಕ್ಕಾಳು

(ರಾಗಿತೆನೆ)

**ಆ) ಜನಪದ ಗೀತೆ:**

ಜನಪದ ಗೀತೆಗಳು ಜನಪದ ಸಾಹಿತ್ಯದಲ್ಲಿ ಅತಿ ಮುಖ್ಯವಾದವು. ಇವು ಹಳ್ಳಿಗಳಲ್ಲಿಯೇ ಹುಟ್ಟಿ ಬೆಳೆದಿವೆ. ಇಂಗ್ಲಿಷಿನಲ್ಲಿ Folk song ಎಂದು ಕರೆಯುತ್ತಾರೆ. ಕ್ರಿಯಾತ್ಮಕತೆ ಜನಪದ ಗೀತೆಗಳ ಬಹುಮುಖ್ಯ ಗುಣ. ಉದಾಹರಣೆಗೆ ಸೋಬಾನೆ ಪದಗಳು, ನಾಟಿ ಪದಗಳು, ದೇವರ ಹಾಡುಗಳು ಇತ್ಯಾದಿ. ಜನಪದ ಗೀತೆ ಮೌಖಿಕ ಪರಂಪರೆಯಲ್ಲಿ ಸಾಗಿ ಬರುವ ಹಾಡುಗಳಾಗಿವೆ. ಗತ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವ ರೈತಾಪಿ ಸಮುದಾಯದ ಸ್ವತ್ತುಗಳು. ಜನಪದ ಗೀತೆಗಳು ಸರಳ, ನೇರ, ಭಾವಗೀತಾತ್ಮಕ ರಚನೆಗಳು. ಮಾನವೀಯ ಗುಣವುಳ್ಳಂತವು. ಇವುಗಳ ಸೃಷ್ಟಿ ಮತ್ತು ಕಲಿಕೆ ಅನೌಪಚಾರಿಕ ರೀತಿಯದಾಗಿರುತ್ತದೆ. ಇವು ಅನಾಮದೇಯ, ಅಜ್ಞಾತ ಕರ್ತೃತ್ವಹೊಂದಿವೆ. ಜನಪದ ಗೀತೆಗಳ ಸೃಷ್ಟಿಕ್ರಿಯೆ ಒಬ್ಬನಿಂದ ಆರಂಭವಾದುದಲ್ಲ. ಹಾಗೆಯೇ ಒಬ್ಬನಿಂದಲೇ ಮುಕ್ತಾಯವೂ ಆಗುವಂತವಲ್ಲ. ಉದಾಹರಣೆಗೆ ಈ ಹಳ್ಳಿಯಲ್ಲಿ ಜನಪದ ಗೀತೆಗಳ ಬಗೆಗೆ ಕೇಳಿದಾಗ ಯಾರೋ ಒಬ್ಬರೇ ಅವುಗಳನ್ನು ಹೇಳಲಿಲ್ಲ. ಅನೇಕರು ತಮ್ಮ ತಮ್ಮ ಅನುಭಾವಗಳಿಗೆ ಸಂಬಂಧಿಸಿದಂತೆ ಹೇಳುತ್ತಾ ಹೋದರು. ಇಂತಹ ಜನಪದ ಗೀತೆಗಳನ್ನು ಕೆಲವರು ವೈಯಕ್ತಿಕ ಸೃಷ್ಟಿ ಎಂದರೆ, ಇನ್ನೂ ಕೆಲವರು ಸಮಷ್ಟಿ ಸೃಷ್ಟಿ ಎಂದೂ ಕರೆಯುವರು. ಪ್ರತಿಭಾಸಂಪನ್ನವಾದ

ಭಾವತೀವ್ರತೆಯೇ ಜನಪದಗೀತೆಯ ಮೂಲಸತ್ವವಾಗಿರುತ್ತದೆ. ಪುನರುಕ್ತಿ ಜನಪದ ಗೀತೆಗಳ ಒಂದು ಅನಿವಾರ್ಯ ಲಕ್ಷಣ. ಇವು ಹಾಡುವಂತಹವು. ಇವುಗಳನ್ನು ಉತ್ತನಹಳ್ಳಿಯ ಅನಕ್ಷರಸ್ಥರ ಬಾಯಿಯಲ್ಲಿ ಕೇಳುವಾಗ, ಯಾವ ಹಿನ್ನಲೆಗಾಯಕರೂ ಇವರಿಗೆ ಸರಿಸಾಟಿಯಿಲ್ಲವೇನೋ ಎಂದೆನಿಸದೇ ಇರದು. ಇಂತಹ ಕೆಲವು ಗೀತೆಗಳನ್ನು ಸಂಗ್ರಹಿಸಲಾಗಿದೆ.

೧. ನೋಡವಳಂದಾವ
ಹೂವಿನಾ ಮಾಲೆ ಚಂದಾವ

೨. ಚೆಲುವಯ್ಯ ಚಲುವೋ ತಂದನ್ನು ತಾನೆ
ಚಿನ್ಮಯ ರೂಪೊ ಕೋಲಣ್ಣ ಕೋಲೆ

ಜನಪದ ಗೀತೆಗಳ ವರ್ಗೀಕರಣವನ್ನು ಹಲವಾರು ಮಂದಿ ಮಾಡಿದ್ದಾರೆ. ರಾಗೌ ಅವರು ಭಾಗ, ವಸ್ತು ಮತ್ತು ಭಾವವನ್ನು ಆಧರಿಸಿ ಈ ರೀತಿಯ ವಿಂಗಡಣೆಗಳನ್ನು ಮಾಡುತ್ತಾರೆ.

೧) ಮಕ್ಕಳ ಹಾಡುಗಳು

೨) ಹೆಂಗಸರ ಹಾಡುಗಳು

೩) ಗಂಡಸರ ಹಾಡುಗಳು

ಹಾಗೆಯೇ ರಾಗೌ ಅವರು ಮತ್ತೊಂದು ವಿಭಾಗ ಕ್ರಮವನ್ನು ಹೇಳುತ್ತಾರೆ.

- ಪ್ರಕೃತಿ ಗೀತೆಗಳು
- ಕೃಷಿ ಗೀತೆಗಳು
- ಪ್ರಣಯ ಮತ್ತು ಮದುವೆ ಹಾಡುಗಳು
- ಕೆಲಸದ ಹಾಡುಗಳು
- ನೃತ್ಯ ಹಾಡುಗಳು

ಉತ್ತನಹಳ್ಳಿಯಂತಹ ಊರುಗಳಲ್ಲಿ ಕ್ಷೇತ್ರಕಾರ್ಯ ಮಾಡಿದಾಗ, ಜನಪದ ಗೀತೆಗಳು ಯಥೇಚ್ಛವಾಗಿ ಸಿಕ್ಕಮೇಲೆ, ಇವರು ಅವುಗಳನ್ನು ವರ್ಗೀಕರಣಮಾಡಿ ಇಟ್ಟಿದ್ದಾರೆ. ಹಳ್ಳಿಗಳೇ ಜನಪದ ಗೀತೆಗಳ ಜನ್ಮದಾತರು. ಉತ್ತನಹಳ್ಳಿಯಲ್ಲಿ ಇಂತಹ

ಗೀತೆಗಳನ್ನು ಅನೇಕ ಸಂದರ್ಭಗಳಲ್ಲಿ, ಕೆಲಸ ಮಾಡುವಾಗ, ವಿಶೇಷ ಕಾರ್ಯಕ್ರಮಗಳಲ್ಲಿ ಮುಂತಾದ ಸಮಯಗಳಿಗೆ ಹಾಡುತ್ತಲೇ ಇರುತ್ತಾರೆ.

**ಇ) ಗಾದೆಗಳು:**

ಸರ್ವೇಸಾಮಾನ್ಯವಾದ ಮತ್ತು ಗಮನಾರ್ಹವಾದ ಉಪಯೋಗದಲ್ಲಿನ ಅಡಕವೂ ಸಾರಭೂತವೂ ಆದ ಮಾತು ಅಥವಾ ಹೆಚ್ಚು ವಿಷಯಗಳನ್ನು ಕೆಲವೇ ಮಾತುಗಳಲ್ಲಿ ಭಟ್ಟಿ ಇಳಿಸಿದುದು ಗಾದೆಯಾಗಿ ಬೆಳೆದು ಬಂದಿದೆ. ಹಲವರ ಜ್ಞಾನ, ಒಬ್ಬನ ವಿವೇಕವೇ ಗಾದೆಗಳು ಜನಸಾಮಾನ್ಯರಲ್ಲಿ ಚಲಾವಣೆಯಲ್ಲಿರುವ ಸಾರ್ವಜನಿಕ ಮುದ್ರೆ ಬಿದ್ದಿರುವ ಪ್ರಚಲಿತವೂ ಸ್ವೀಕೃತ ಮೌಲ್ಯಾಭರಿತವೂ ಆಗಿರುವ ನಾಣ್ಯವೇ ಗಾದೆಗಳು. ಇಂತಹ ಗಾದೆಗಳು ಪದ್ಯಗದ್ಯ ಎರಡರಲ್ಲೂ ರಚಿತವಾಗಿವೆ. ಗದ್ಯವೆಂದರೆ ಸಾಮಾನ್ಯ ಗದ್ಯವಲ್ಲ, ಪದ್ಯವೆಂದರೆ ನಿರ್ದಿಷ್ಟವಾದ ನಿರ್ದಿಷ್ಟವಾದ ಪದ್ಯವಲ್ಲ. ವಚನಗಳನ್ನು ಹೋಲುವಂತಹವು. ಇವು ನಾಟಕೀಯತೆಯಿಂದ ಕೂಡಿರುತ್ತವೆ. ಸಮತೂಕವಾಗಿದ್ದು, ಸಂಕ್ಷಿಪ್ತತೆ, ತೀಕ್ಷ್ಣತೆಯಿಂದ ಕೂಡಿರುತ್ತವೆ.

ಗಾದೆಗಳು ಜ್ಞಾನದ ಆಗರವೂ ಅನುಭವದ ಸಾಗರವೂ ಆಗಿವೆ. ಕಾಲದಿಂದ ಕಾಲಕ್ಕೆ ಸಂಸ್ಕೃತಿಯನ್ನು ನಿಶ್ಚಿತ ರೀತಿಯಲ್ಲಿ ಪ್ರವಹಿಸುವ ಸಾಧನ, ಗಾದೆಗಳು ಸಾಮಾಜಿಕ ಶಿಲ್ಪ, ಜನಸಾಮಾನ್ಯನ ಬಾಳ್ವೆಗೆ ಬರೆದ ಸ್ಮಾರಕ, ಸಾಮಾನ್ಯನ ತತ್ವಶಾಸ್ತ್ರವೇ ಗಾದೆಗಳು. ಇಂತಹ ಗಾದೆಗಳ ಬಗೆಗೆ ಅವುಗಳ ಉಗಮದ ಬಗೆಗೆ, ವಿಕಾಸದ ಬಗೆಗೆ ಎರಡು ಅಂಶಗಳನ್ನು ಕಾಣಬಹುದು – ಅವುಗಳೆಂದರೆ

೧) ಜನತಾ ಸೃಷ್ಟಿಯ ಜನಪ್ರಿಯ ಗಾದೆಗಳು

೨) ವಿದ್ಯಾವಂತ ಸಾಹಿತ್ಯ ಗಾದೆಗಳು

ಈ ಎರಡು ಮಾದರಿಗಳು ಜಾನಪದ ಸಾಹಿತ್ಯ ಹಾಗೂ ಶಿಷ್ಟಸಾಹಿತ್ಯಕ್ಕೆ ಸಂಬಂಧಿಸಿರುವಂತದ್ದು. ವಿದ್ಯಾವಂತರ ಸಾಹಿತ್ಯಕ್ಕೆ ಬರವಣಿಗೆ ರೂಪವಿರುತ್ತದೆ, ಇಂತವರೇ ರಚಿಸಿದರೆಂಬ ಆಧಾರಗಳೂ ಇರುತ್ತವೆ. ಆದರೆ ಜನತಾ ಸೃಷ್ಟಿಯು ಜನರಿಂದ ಸೃಷ್ಟಿಯಾಗಿದೆ ಎಂಬುದನ್ನಷ್ಟೇ ಹೇಳುತ್ತವೇ ವಿನಃ ಯಾರಿಂದ ಎಂದು ಹೇಳಲು ಸಾಧ್ಯವಿಲ್ಲ. ಇವು ಬಾಯಿಂದ ಬಾಯಿಗೆ, ಮಾತಿನ ಮೂಲಕ ಬೆಳೆದು ಬಂದಂತಹವುಗಳು. ಇಂತಹ ಗಾದೆಗಳು ಹಳ್ಳಿಗಳಲ್ಲಿ ಉಗಮವಾದವೆನ್ನಬಹುದು. ಇವುಗಳನ್ನು ಹಲವಾರು ವಿಧಗಳಾಗಿ ವಿಂಗಡಿಸಬಹುದು.

- ಕೃಷಿಸಂಬಂಧ ಗಾದೆಗಳು
- ರೂಢಿ, ಪದ್ಧತಿ, ಸಂಪ್ರದಾಯಗಳಿಗೆ ಸಂಬಂಧಿಸಿದ ಗಾದೆಗಳು
- ವೃತ್ತಿ ಆಧಾರಿತ ಗಾದೆಗಳು
- ಜನಾಂಗ ಆಧಾರಿತ ಗಾದೆಗಳು
- ಆಹಾರ–ಪಾನೀಯ ಸಂಬಂಧೀಗಾದೆಗಳು
- ವೇದಾಂತ ಆದರ್ಶ ಕುರಿತಾದ ಗಾದೆಗಳು
- ವ್ಯಾವಹಾರಿಕ ಗಾದೆಗಳು
- ಪ್ರಾಣಿ ಸ್ವಭಾವ ಕುರಿತಾದ ಗಾದೆಗಳು
- ವೈದ್ಯಕೀಯಕ್ಕೆ ಸಂಬಂಧಿಸಿದ ಗಾದೆಗಳು

ಗಾದೆಗಳನ್ನು ಸಂಸ್ಕೃತದಲ್ಲಿ 'ಲೋಕೋಕ್ತಿ' ಎನ್ನುವರು. ಇಂಗ್ಲಿಷಿನಲ್ಲಿ 'ಪ್ರೊವರ್ಬ್ಸ್' ಎಂದರೆ ಕನ್ನಡದಲ್ಲಿ ಗಾದೆ, ನಾಣ್ಣುಡಿ ಎಂದು ಕರೆಯುತ್ತಾರೆ. ಗಾದೆ ಬಗೆಗೆ (೧) ಗಾದೆಗಳು ಎಂದೂ ಸುಳ್ಳು ಹೇಳುವುದಿಲ್ಲವೆಂದು ಜರ್ಮನ್ ಜನಪದ ಸಾಹಿತ್ಯ ಹೇಳುತ್ತದೆ. (೨) ಗಾದೆಯಲ್ಲಿ ಉಸಿ ಇದ್ದರೆ ಹಾಲಿನಲ್ಲಿ ಬಳಿ ಇರುತ್ತದೆ ಎಂದು ಮಳೆಯಾಳಂ ಭಾಷೆ ಹೇಳುತ್ತದೆ (೩) ಗಾದೆ ತಿಳಿದ ವಿವೇಕ ಜಗಳ ಬಿಡುಸುತ್ತಾನೆ ಎಂದು ಆಫ್ರಿಕಾಭಾಷೆ ಹೇಳಿದರೆ, (೪) ವೇದ ಸುಳ್ಳಾದರೂ ಗಾದೆ ಸುಳ್ಳಾಗದು, ಗಾದೆಗಳು ವೇದಗಳಿಗೆ ಸಮಾನ ಎಂದ ಕನ್ನಡದಲ್ಲಿ ಹೇಳಲಾಗುತ್ತದೆ.

ಪ್ರಖ್ಯಾತ ಕವಿ ಷೇಕ್ಸ್‌ಪಿಯರ್ ಒಂದು ಕಡೆ ಗಾದೆಗಳನ್ನು ಕುರಿತು ಹೀಗೆ ಹೇಳುತ್ತಾರೆ – " ಸಾಮಾನ್ಯವಾಗಿ ಗಾದೆ ಇಲ್ಲದ ಭಾಷೆಯಲ್ಲಿ ಗಾದೆ ಬರದ ಮನುಷ್ಯನಿಲ್ಲ. ಗಾಳಿ ಬೆಳಕಿನಂತೆ ಆವರಿಸಿಕೊಂಡಿರುವ ಗಾದೆ, ಜಾನಪದ ಸಾಹಿತ್ಯ ಪ್ರಕಾರಗಳಲ್ಲೊಂದು"

ಗಾದೆಗಳು ಆಕಾರದಲ್ಲಿ ವಾನನಂತಿದ್ದರೂ, ಅರ್ಥದಲ್ಲಿ ತ್ರಿವಿಕ್ರಮನಂತಿದೆ, ಇವು ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ಇವು ಚಿಟ್ಟೆಗಳಿದ್ದ ಹಾಗೆ, ಕೆಲವು ಸಿಕ್ಕಿಕೊಳ್ಳುತ್ತವೆ. ಮಿಕ್ಕವು ಹಾರಿಹೋಗುತ್ತದೆ, ಇವುಗಳ ಅರ್ಥ ಅತ್ಯಂತ ಸೂಕ್ಷ್ಮಾತಿಸೂಕ್ಷ್ಮತೆಯಿಂದ ಕೂಡಿರುತ್ತವೆ. ಇಂತಹ ಕೆಲವು ಗಾದೆಗಳನ್ನು ಈ ಗ್ರಾಮದಲ್ಲಿ ಕ್ಷೇತ್ರಕಾರ್ಯಮಾಡಿ ಸಂಗ್ರಹಿಸಲಾಗಿದೆ.

- ಆಳಿನ ಮುದ್ದೆ ನಾಯಿಪಾಲು, ಮುದುಕ್ರ ಹೆಂಡ್ರು ಹುಡುಗರ ಪಾಲು
- ಮನಿಗೋದ್ರೆ ಮಜ್ಜಿಗೆ ಕೊಡದೋಳು, ಹೇಳಿ ಕಳಿಸಿದ್ರೆ ಹಾಲು ಕೊಟ್ಟಳ
- ಆಕಾಶ ನೋಡೋಕೆ ನೂಕು ನುಗ್ಗಲು ಯಾಕೆ
- ಅಜ್ಜಿ ಇದ್ದರೆ ಕೊರೆತ ಕಜ್ಜಿ ಇದ್ದರೆ ಕೆರೆತ
- ಕತ್ತೆ ಮರೀಲಿ ಚೆಂದ, ಅತ್ತೆ ಹೊಸದರಲ್ಲಿ ಚೆಂದ
- ಹಿಂದಿದ್ನ ನೆನೆಕೋ, ಹಿಮ್ಮಡಿ ತೊಳ್ಕೋ
- ಹಾವು ಬಡಿದು ಹದ್ದಿಗೆ ಕೊಟ್ಟಂಗಾಯಿತು.
- ಗಿಳಿ ಸಾಕಿ ಗಿಡುಗನ ಕೈಲಿ ಕೊಟ್ಟಂಗೆ – ಇತ್ಯಾದಿ

**ಈ) ಜನಪದ ಕಥೆಗಳು:**

ಜನಪದ ಕಥೆಗಳು ಬಹುಮುಖ್ಯವಾದ ಕ್ರಿಯೆಯೊಂದರಿಂದ ಆರಂಭ-ವಾಗುವುದಿಲ್ಲ ಮತ್ತು ದಿಢೀರನೆ ಮುಕ್ತಾಯವೂ ಆಗುವುದಿಲ್ಲ. ಸಾವಕಾಶವಾದ ಪ್ರವೇಶದಿಂದ ಕೂಡಿದ್ದು, ಉತ್ಕರ್ಷಕ್ಕೆ ಏರಿದ ಮೇಲೂ ನಿಲುಗಡೆಯ ಸ್ಥಾನದ ತನಕ ಮುಂದುವರೆಯುತ್ತದೆ. ಜೊತೆಗೆ ಇವು ಅನೇಕ ಸಂದರ್ಭಗಳಲ್ಲಿ ಪುನರಾವರ್ತನೆ-ಗೊಳ್ಳುತ್ತವೆ. ಕಥೆಗಳು ಬೆಳೆಯುತ್ತಾ ಬೆಳೆಯುತ್ತಾ ಮುಂದುವರೆದಂತೆ ನಿರೀಕ್ಷೆಗಳು ಹೆಚ್ಚುತ್ತಾ ಹೋಗುತ್ತವೆ. ಸಾಮಾನ್ಯವಾಗಿ ಇಬ್ಬರು ಮಾತ್ರ ಒಂದು ದೃಶ್ಯದಲ್ಲಿ ಕಾಣಿಸಿಕೊಳ್ಳುತ್ತಾರೆ. ಇಬ್ಬರಿಗಿಂತ ಹೆಚ್ಚು ಜನರಿದ್ದರೆ ಇಬ್ಬರು ಮಾತ್ರ ಕ್ರಿಯಾಶೀಲ-ರಾಗಿರುತ್ತಾರೆ. ನಾಯಕ ಮತ್ತು ಖಳನಾಯಕ, ಶಿಷ್ಟ ದುಷ್ಟ. ಇಂಥ ವೈದೃಶ್ಯ ಪಾತ್ರಗಳ ಸಮಾಗಮವಿರುತ್ತದೆ. ಒಂದೇ ಪಾತ್ರದಲ್ಲಿ ಇಬ್ಬರು ಕಾಣಿಸಿಕೊಂಡರೆ, ಅವರು ಎಳೆಯರಾಗಿ ಅಥವಾ ಆಶಕ್ತರಾಗಿ ಚಿತ್ರಿತರಾಗಿರುತ್ತಾರೆ. ದುರ್ಬಲರು ಉತ್ತಮರಾಗುವ ಸಾಧ್ಯತೆ ಹಾಗೂ ಕಿರಿಯರು ಜಯಶೀಲರಾಗುವುದು ಹೆಚ್ಚಾಗಿರುತ್ತದೆ. ಪಾತ್ರಚಿತ್ರಣವು ತುಂಬಾ ಸರಳವಾಗಿರುತ್ತದೆ. ಪಾತ್ರಕ್ಕೆ ಹೊರತಾದ ಯಾವುದೇ ಜೀವನದ ಸುಳಿವು ಕಂಡುಬರುವುದಿಲ್ಲ. ಈ ಕಥೆಗಳ ವಸ್ತುವೂ ಕೂಡ ಸರಳತೆಯಿಂದ ಕೂಡಿರುತ್ತದೆ. ಜೊತೆಗೆ ನೆರವಾಗಿರುತ್ತದೆ. ವೈವಿಧ್ಯತೆಯನ್ನು ತರುವ ಯಾವುದೇ ಪ್ರಯತ್ನ ಇಲ್ಲಿ ಇರುವುದಿಲ್ಲ.

ಜನಪದ ಕಥೆಗಳು ಊಹೆಗೆ ಏನೂ ಬಿಡುವುದಿಲ್ಲ. ಎಲ್ಲವನ್ನೂ ಸಮರ್ಪಕ-ವಾಗಿ ಹೇಳಿಬಿಡುತ್ತವೆ. ಕಥೆ ಆರಂಭಗೊಂಡಿತೆಂದರೆ ಮುಕ್ತಾಯದ ತನಕ ನಿರರ್ಗಳ-

ವಾಗಿ ಹರಿಯುತ್ತವೆ. ಕಥೆಗಳು ನೇರ ಹಾಗೂ ಸ್ಪಷ್ಟ ವೈವಿಧ್ಯತೆಯ ಆರ್ಭಟವಿರು-ವುದಿಲ್ಲ. ವಸ್ತುವಿನ ಜಟಿಲತೆಯಿರುವುದಿಲ್ಲ. ಪಾತ್ರಗಳ ತೊಡಕಿರುವುದಿಲ್ಲ. ಕಥೆಗಳನ್ನು ಹೇಳುವುದೊಂದೇ ಇಲ್ಲಿ ಪ್ರಧಾನ ಅಂಶವಾಗಿರುತ್ತದೆ. ಇವುಗಳಲ್ಲಿ ನಾಯಕ ನಾಯಕಿ, ಕರುಗಾಳು ಸಹಾಯಕರು, ಪ್ರತಿನಾಯಕರು, ಮಾಂತ್ರಿಕ ವಸ್ತುಗಳು, ಸಂಖ್ಯೆಗಳು ಇರುತ್ತವೆ. ಹೀಗೆ ಸಿಗುವಂತಹ ಜನಪದ ಕತೆಗಳನ್ನು ಮುಖ್ಯವಾಗಿ ಎರಡು ವಿಧಗಳಾಗಿ ವಿಂಗಡಿಸಿಕೊಳ್ಳಬಹುದಾಗಿದೆ. ಅವುಗಳೆಂದರೆ

೧) ಸಂಕೀರ್ಣ ಕಥೆಗಳು–ಅ) ಕಟ್ಟುಕಥೆಗಳು – ಅತಿಮಾನುಷ ಕಥೆಗಳು

– ಮಾಟ ಮತ್ತು ಅದ್ಭುತ ಕಥೆಗಳು

ಆ) ವಾಸ್ತವಿಕ ಕಥೆಗಳು – ಪ್ರೇಮಿಗಳ, ದಂಪತಿಗಳ ಕಥೆಗಳು

ಪರೀಕ್ಷೆಗಳು, ಸಾಹಸಗಳ ಕಥೆಗಳು

ಮೂರು ಲೋಕಗಳ ಕಥೆಗಳು

ಅತೀತ ಶಕ್ತಿಗಳ ಕಥೆಗಳು

ವಿಧೇಯತೆ ಕಥೆಗಳು

ಒಳ್ಳೆಯ ಹಾಗೂ ಕೆಟ್ಟ ಬಂಧುಗಳ ಕಥೆಗಳು

ಅತಿಮಾನುಷ ಗಂಡಂದಿರ ಕಥೆಗಳು

೨) ಸರಳ ಕಥೆಗಳು – ಹಾಸ್ಯ ಕಥೆಗಳು

- ಪ್ರಾಣಿ ಕಥೆಗಳು
- ಸೂತ್ರ ಕಥೆಗಳು
- ವಿನೋದ ಕಥೆಗಳು
- ನೀತಿ ಕಥೆಗಳು

ಇಂತಹ ಹಲವಾರು ಕಥೆಗಳು ಈ ಜನಪದ ಕಥೆಗಳಲ್ಲಿ ಕಂಡುಬರುತ್ತವೆ. ಇಂತಹ ಅನೇಕ ಕಥೆಗಳನ್ನು ಉತ್ತನಹಳ್ಳಿಯಲ್ಲಿ ಕಾಣಬಹುದು. 'ಉತ್ತನಹಳ್ಳಿ' ಊರು ಹೇಗೆ ಉಗಮವಾಯಿತೆಂಬ ಜನಪದ ಕಥೆ, 'ಉತ್ತನಹಳ್ಳಿ' ಎಂಬ ಹೆಸರು ಬಂದ ಬಗ್ಗೆ ಇರುವ ಕಥೆಯಾಗಲೀ, ಜೊತೆಗೆ ಈ ಊರು ಚಾಮುಂಡಿ ಬೆಟ್ಟದ ತಳಭಾಗದಲ್ಲಿಯೇ ಕಟ್ಟಲ್ಪಟ್ಟ ಬಗ್ಗೆ ಜನಪದ ಕಥೆಯನ್ನು ಕೇಳಬಹುದಾಗಿದೆ.

**ಉ) ಕೋಲಾಟ:** ಇದು ಈ ಗ್ರಾಮದಲ್ಲಿ ಕಂಡುಬರುವ ಒಂದು ಮನರಂಜನೀಯವಾದ ಕಲೆ. ಇದನ್ನು ಹಬ್ಬಹರಿದಿನಗಳಲ್ಲಿ ಮಾತ್ರವಲ್ಲದೆ ಹಾಲು ಬೆಳದಿಂಗಳಿನಲ್ಲಿ ಕೋಲಾಟವಾಡುವುದು ಇಲ್ಲಿನ ಜನರಿಗೆ ಉಲ್ಲಾಸ ಮತ್ತು ಉತ್ಸಾಹ. ಹೆಚ್ಚಾಗಿ ಯುವಕರೇ ಪಾಲ್ಗೊಳ್ಳುವ ಈ ಕುಣಿತ ಎಷ್ಟು ಆಕರ್ಷಕವೋ ಕುಣಿತದ ಸಂದರ್ಭದಲ್ಲಿ ಹಾಡುವ ಪದಗಳು ಅಷ್ಟೇ ರಂಜನೀಯ. ಇಲ್ಲಿಯ ಕಲಾವಿದರು ಸಮವಸ್ತ್ರ ಧರಿಸಿ ಕಾಲಿಗೊಂದು, ತಲೆಗೊಂದು ಮತ್ತು ಕೈಗೊಂದು ಬಣ್ಣ ವಸ್ತ್ರ ಕಟ್ಟಿಕೊಂಡಿರುತ್ತಾರೆ. ಈ ಕೋಲಾಟದಲ್ಲಿ ಕೋಲು ಹುಯ್ಯುವವರ ಸಂಖ್ಯೆ ಸಮಾನಾಗಿರುತ್ತದೆ. ಕೋಲಾಟದ ಸಂದರ್ಭದಲ್ಲಿ ಬಳಸುವ ಹಾಡೊಂದನ್ನು ಹೀಗೆ ನೋಡಬಹದು.

"ಚೆಲುವಯ್ಯ ಚೆಲುವೋ ತಾನೀ ತಂದಾನಾ
ಚಿನ್ನ ನಾನಾರು ಕೇಳೋ ಕೋಲಣ್ಣ ಕೋಲೆ ॥ಪ॥
ನೀರಿಗಂತ ನೀನು ಬಾರೆ
ಹೇರಿಗಂತ ನಾನು ಬರ್ತೀನಿ
ಕುಂತು ನಿಂತು ಮಾತನಾಡೋಣ"

ಕೋಲಾಟದಲ್ಲಿ ನಾನಾ ವಿಧಗಳನ್ನು ನೊಡಬಹುದು ಅವುಗಳಲ್ಲಿ ಸುತ್ತುಕೋಲು, ಚಿಟಕಿಕೋಲು, ಉಯ್ಯಾಲೆ ಕೋಲು ಮುಂತಾದವು.

**ಊ) ರಂಗದ ಕುಣಿತ:** ಮೈಸೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿ ವಿಶೇಷವಾಗಿ ಬರುವ ಅದರಲ್ಲೂ ಉತ್ತನಹಳ್ಳಿಯಲ್ಲಿ ಕಂಡುಬರುವ ಮತ್ತೊಂದು ಕಲೆ ಇದು. ದೇವಾಲಯದ ಮುಂಭಾಗದಲ್ಲಿ ನಡೆವ ಕುಣಿತ ಇದು. ಆದ್ದರಿಂದಲೇ ಇದನ್ನು ರಂಗದ ಕುಣಿತ ಎಂದು ಕರೆಯುತ್ತಾರೆ. ಮಾರಿ ಹಬ್ಬದಲ್ಲಿ ನಡೆಯು-ವುದರಿಂದ ಮಾರಿಕುಣಿತ ಎಂದು ಸಹ ಕರೆಯುತ್ತಾರೆ.

"ಈ ಕುಣಿತಕ್ಕೂ ಗ್ರಾಮದೇವತೆಗಳ ಹಬ್ಬಕ್ಕೂ ವಿಶೇಷ ನಂಟು. ಮಾರಿಹಬ್ಬ ಈ ಕುಣಿತಕ್ಕೆ ವಿಶೇಷ ಸಂದರ್ಭ. ಈ ಕುಣಿತದಲ್ಲಿ ಯಾವುದೇ ರೀತಿಯ ಹಾಡುಗಳನ್ನು ಹಾಡುವುದಿಲ್ಲ. ಕುಣಿತಕ್ಕೆ ಹಿನ್ನೆಲೆಯಾಗಿ ಎರಡು ಬಗೆಯ ವಾದ್ಯಗಳನ್ನು ಬಳಸುತ್ತಾರೆ. ಕೆಲವೆಡೆ ಡೋಲುಗಳನ್ನು ಬಳಸುವುದನ್ನು ಕಾಣಬಹುದು."[೧] ಈ ಕುಣಿತಕ್ಕೆ ಕಲಾವಿದರು ವಿಶೇಷ ಉಡುಗೆತೊಡುಗೆಗಳನ್ನು ಬಳಸುವುದಿಲ್ಲ. ಕುಣಿಯುವಾಗ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನಡುವಿಗೆ ಒಂದು ಚೌಕವನ್ನು

ಸುತ್ತಿಕೊಳ್ಳುತ್ತಾರೆ. ವರ್ಷಕ್ಕೊಮ್ಮೆ ಜರುಗುವ ಮಾರಿಹಬ್ಬದಲ್ಲಿ ವಿಶೇಷವಾಗಿ ನಡೆಯುವ ಕುಣಿತವಿದು.

**ಖ) ಈರಮಕ್ಕಳ ಕುಣಿತ:** ರಂಗದ ಕುಣಿತದ ಸಾಲಿನಲ್ಲಿ ಬರುವ ಮತ್ತೊಂದು ಸಾಮೂಹಿಕ ಕುಣಿತ, ಮಾರಿಹಬ್ಬ ಅಥವಾ ಉತ್ಸವದಂದು ಇದು ನಡೆಯುತ್ತದೆ. ವೀರಮಕ್ಕಳು ಎಂಬುದು ಜನರ ಬಾಯಲ್ಲಿ ಈರ ಮಕ್ಕಳು ಎಂದಾಗಿರಬೇಕು. ಇದನ್ನು ಮೊದಲು ಮಾರಿಹಬ್ಬದಲ್ಲಿ ಅಥವಾ ಜಾತ್ರೆಯಲ್ಲಿ ತಪ್ಪದೇ ಪ್ರದರ್ಶಿಸುತ್ತಿದ್ದರೂ, ಆದರೆ ಇತ್ತೀಚಿನ ದಿನಗಳಲ್ಲಿ ಇದು ತನ್ನ ಮೂಲ ರೂಪವನ್ನು ಕಳೆದುಕೊಂಡಿದೆ. ಇದರಲ್ಲಿ ೨೦ ರಿಂದ ೨೫ ಹುಡುಗರು ಪಾಲ್ಗೊಳ್ಳುತ್ತಾರೆ. ತಲೆಯ ಮೇಲೆ ತೆಂಗಿನಕಾಯಿ ಒಡೆದುಕೊಳ್ಳುವುದು ಈರಮಕ್ಕಳ ಕುಣಿತದ ಆಕರ್ಷಣೆ. ವೀರಾವೇಶದಲ್ಲಿ ಕುಣಿಯುವ ಒಂದಿಬ್ಬರು ಈ ಪವಾಡವನ್ನು ಮಾಡುತ್ತಾರೆ. ಇದರಲ್ಲಿ ಪಾಲ್ಗೊಳ್ಳುತ್ತಿದ್ದ ಯುವ ಜನರು ಸಮೂಹ ಮಾಧ್ಯಮಗಳಿಗೆ ದಾಸರಾಗುತ್ತಾ, ಆಧುನಿಕತೆಯತ್ತ ಮುಖ ಮಾಡುತ್ತಿರುವುದರಿಂದ ಮತ್ತು ಹಳ್ಳಿಗಳಲ್ಲಿ ಒಗ್ಗಟ್ಟು ಸಾಮರಸ್ಯಗಳಿಲ್ಲದೆ ಇರುವುದರಿಂದ ಇತ್ತೀಚಿನ ದಿನಗಳಲ್ಲಿ ಈ ಕುಣಿತ ತನ್ನ ಜನಪ್ರಿಯತೆಯನ್ನು ಕಳೆದುಕೊಂಡಿದೆ.

**ಎ) ವೀರಗಾಸೆ:** ವೀರಗಾಸೆಯ ಮೂಲ ಪುರುವಂತಿಕೆ ಮೇಳದಲ್ಲಿ ಕಂಡುಬರುತ್ತದೆ. ರುದ್ರನಂತೆ ವೇಷಭೂಷಣ ಧರಿಸಿ, ಚಮ್ಮಾಳ ಬಾರಿಸುವ ವ್ಯಕ್ತಿಯ ಮುಂದೆ ಪರಾಕು ಹೇಳುತ್ತಾ ಕತ್ತಿ ಹಿಡಿದು ತಾಳ ಚಮ್ಮಾಳ ಗತಿಗೆ ತಕ್ಕಂತೆ ರೌದ್ರಾವೇಶದಿಂದ ಕುಣಿಯುವ ನೃತ್ಯವೇ ವೀರಗಾಸೆ. ಇವರನ್ನು 'ಲಿಂಗದ ದೇವರು' ಎಂದು ಕರೆಯುತ್ತಾರೆ.

ವೀರಭದ್ರನ ಪ್ರತಾಪವನ್ನು ಹೇಳುವ ಕಲೆಯೇ ವೀರಗಾಸೆ ಕುಣಿತ ಇದರ ಹಿಂದೆ ಒಂದು ಪೌರಾಣಿಕ ಕಥೆಯೇ ಇದೆ. "ದಕ್ಷಬ್ರಹ್ಮನಿಗೂ ಅವನ ಅಳಿಯ ಈಶ್ವರನಿಗೂ ವೈರತ್ವ ಬಂದು ದಕ್ಷ ಬ್ರಹ್ಮ ತಾನು ಮಾಡುವ ಯಾಗಕ್ಕೆ ಈಶ್ವರನನ್ನು ಆಹ್ವಾನಿಸುವುದಿಲ್ಲ. ಪತಿಯ ಮಾತನ್ನು ತಿರಸ್ಕರಿಸಿದ ಪಾರ್ವತಿಯು ತಂದೆ ಮಾಡಿದ ಯಜ್ಞಕ್ಕೆ ಹೋದಾಗ ದಕ್ಷಬ್ರಹ್ಮ ಈಶ್ವರನನ್ನು ಹೀಯಾಳಿಸುತ್ತಾನೆ. ಇದನ್ನು ಸಹಿಸದ ಪಾರ್ವತಿ ಅಗ್ನಿಕುಂಡಕ್ಕೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆಗ ಈಶ್ವರ ಉಗ್ರನಾಗಿ ತಾಂಡವ ನೃತ್ಯ ಮಾಡಿದಾಗ ಬಿದ್ದ ಬೆವರಹನಿಗಳಿಂದ ವೀರಭದ್ರ ಜನಿಸಿ ತಂದೆಯ ವೈರಿಯನ್ನು ನಾಶಮಾಡಿದ."[೧]

ಲಿಂಗಧಾರಣೆಯಾದ ತಮ್ಮಡಿಗಳು ವೀರಭದ್ರನ ಕಾಸೆ ಕಟ್ಟುವುದರಲ್ಲಿ ಪರಿಣಿತರಾಗಿರುತ್ತಾರೆ. ಲಿಂಗಾಯಿತ ಮತ್ತು ಕುರುಬ ತಮ್ಮಡಿಗಳು ಇದರಲ್ಲಿ ಪ್ರವೀಣರು.

ಮದುವೆ, ಹಬ್ಬಹರಿದಿನಗಳಲ್ಲಿ, ಗೃಹಪ್ರವೇಶ ಸಂದರ್ಭದಲ್ಲಿ, ಕಾರ್ತಿಕ ಶ್ರಾವಣ ಸೋಮವಾರಗಳಂದು ಲಿಂಗದ ವೀರರು ಈ ಕಲೆಯನ್ನು ಪ್ರದರ್ಶಿಸುವುದು ವಾಡಿಕೆ. ಲಿಂಗದ ವೀರರ ವೇಷಭೂಷಣ ವಿಶಿಷ್ಟವಾದುದು. ವೀರಭದ್ರ ೩೨ ಆಯುಧಗಳಿಂದ ಹುಟ್ಟಿಬಂದ ಎಂಬ ಪೌರಾಣಿಕ ಕಲ್ಪನೆಯಂತೆ ವೀರಭದ್ರನ ಪಾತ್ರ ಧಾರಿಗಳು ೩೨ ಆಯುಧ ಉಡುಪುಗಳನ್ನು ಧರಿಸುವುದು ವಾಡಿಕೆ. ನಡುವಿಗೆ ಹರಿ, ಶಿವ, ಬ್ರಹ್ಮ, ನರಸಿಂಹನ ತಲೆಯಿಂದ ಕೂಡಿದ ಚಿತ್ರವಿರುವ ನಡುಪಟ್ಟಿ, ಮಂಡಿಗೆ ಜಂಗು, ಕಾಲಿಗೆ ಗೆಜ್ಜೆ, ಬಲಗೈಗೆ ಹರಿಸಿನ ಬಟ್ಟೆಯ ಕಂಕಣ ಕಟ್ಟಿರುತ್ತಾರೆ. ಬಲಗೈಯಲ್ಲಿ ಕತ್ತಿ ಇದು ವೀರಭದ್ರನು ಹುಟ್ಟಿ ಬಂದಾಗ ಕತ್ತಿಯನ್ನು ಹಿಡಿದು ಬಂದಿರುವ ಸಂಕೇತ. ಎಡಗೈಯಲ್ಲಿ ಘಂಟೆ, ಕೈಗಳಿಗೆ ವಿಭೂತಿಪಟ್ಟೆ, ಮೈಗೆ ಕಾವಿ ಬಣ್ಣದ ನಿಲುವಂಗಿ, ಕಾಸೆ ಧರಿಸುವುದು ವಾಡಿಕೆ, ಕಿವಿಗೆ ರುದ್ರಾಕ್ಷಿ, ಹಣೆಹುಬ್ಬು ಕಿವಿಗಳಿಗೆ ವಿಭೂತಿ, ಕೊರಳು ತೋಳು ಮುಂಗೈಗಳಲ್ಲಿ ರುದ್ರಾಕ್ಷಿ ಮಾಲೆ, ನಾಗಾಭರಣ ಎದೆಯಹತ್ತಿರ ವೀರಭದ್ರನ ಹಲಗೆ ಇವು ವೀರಗಾಸೆಯವರ ಉಡುಗೆ ತೊಡುಗೆಗಳು.

**ಏ) ಬೀಸು-ಕಂಸಾಳೆ ಕುಣಿತ:** ಇದೊಂದು ಕೌಶಲಪೂರ್ಣವಾದ ಜನಪದ ಕಲೆ. ಈ ಕಂಸಾಳೆಯವರನ್ನು ದೇವರಗುಡ್ಡರೆಂದು ಕರೆಯುತ್ತಾರೆ. 'ಗುಡ್ಡ'ರೆಂದರೆ ಸಾಮಾನ್ಯವಾಗಿ ಮಹದೇಶ್ವರನ ಭಕ್ತರು. ಶಿವ ಮತ್ತು ಆತನ ಭಕ್ತರ ಲೀಲೆಗಳನ್ನು ಕಥೆಯಾಗಿಸಿ, ಹಾಡಿನ ರೂಪದಲ್ಲಿ ವ್ಯಕ್ತಪಡಿಸುವ ವಿಶಿಷ್ಟ ಸಂಪ್ರದಾಯವೊಂದು ಕರ್ನಾಟಕದಲ್ಲಿದೆ. ಕಂಸಾಳೆಯ ಗತ್ತು ಮತ್ತು ತಾಳಕ್ಕೆ ಅನುಗುಣವಾಗಿ ಗುಡ್ಡರು ಅನೇಕ ಗೀತೆ ಮತ್ತು ಲಾವಣಿಗಳನ್ನು ಸುಶ್ರಾವ್ಯವಾಗಿ ಹಾಡುತ್ತಾರೆ. ಬಿಳಿಯ ಅಂಗಿ, ಪಂಚೆ, ಹೆಗಲಲ್ಲಿ ಜೋಳಿಗೆ, ಕೊರಳಲ್ಲಿ ರುದ್ರಾಕ್ಷಿ, ಹಣೆಯಲ್ಲಿ ವಿಭೂತಿ ಇದು ಗುಡ್ಡರ ವೇಷಭೂಷಣ. ಕಂಸಾಳೆ ಬಟ್ಟಲು ಅವರಿಗೆ ದೇವರ ಸಾಂಕೇತಿಕ ರೂಪ. ಕಂಸಾಳೆಯಲ್ಲಿಯೇ ಬೀಸು ಕಂಸಾಳೆ ಒಂದು ರೋಮಾಂಚನಕಾರಿಯಾದ ಜನಪದ ನೃತ್ಯ. ಇದು ಮಲೆಯ ಮಹದೇಶ್ವರನ ಗುಡ್ಡರು ನಡೆಸಿಕೊಡುವ ಆರಾಧನೆಯ ಕುಣಿತ. ಈ ಕುಣಿತಕ್ಕೆ ಬಳಸುವ ಸಾಧನವೆಂದರೆ ಎರಡು ಹಿತ್ತಾಳೆ ಬಟ್ಟಲುಗಳು. ಈ ಬಟ್ಟಲಿನ ಜೊತೆಗೆ ತಂಬೂರಿ, ದಮ್ಮಡಿ, ಕೈತಾಳಗಳನ್ನು ಹಿನ್ನೆಲೆಯಾಗಿ ಬಳಸುತ್ತಾರೆ. ನಾಲ್ಕೈದು ಜನರು

ಒಂದು ಪಕ್ಕದಲ್ಲಿ ನಿಂತು ಈ ವಾದ್ಯಗಳನ್ನು ನುಡಿಸುತ್ತಾ ಕಂಸಾಳೆ ಪದಗಳನ್ನು ಹಾಡುತ್ತಾರೆ.

ಈ ಕುಣಿತದಲ್ಲಿ ಅನೇಕ ಬಗೆಗಳಿವೆ. ರಂಗದ ಮೇಲೆ ಒಬ್ಬನೇ ಬಂದು ನಡೆಸುವ ನೃತ್ಯದಲ್ಲಿ ಕಲಾವಿದನು ಮೇಳದ ಪಕ್ಕವಾದ್ಯದ ಗತ್ತಿಗನುಗುಣವಾಗಿ ೩ ಅಥವಾ ೪ ಹೆಜ್ಜೆ ಹಾಕಿ ಕುಣಿಯುತ್ತಾ ತಲೆಯ ಮೇಲೆ, ಬೆನ್ನು ಹಿಂದೆ, ಕಾಲುಕೆಳಗೆ, ಕುಳಿತು ಬಾಗಿ ಬಳುಕಿ, ನೆಲದ ಮೇಲೆ ಹೊರಳಾಡಿ ಕಂಸಾಳೆಗಳನ್ನು ವಿವಿಧ ಭಂಗಿಯಲ್ಲಿ ಪ್ರದರ್ಶಿಸುತ್ತಾರೆ.

**ಐ) ನಂದಿಕಂಬದ ಕುಣಿತ:** ನಂದಿಕಂಬದ ಕುಣಿತ ಶೈವಸಂಪ್ರದಾಯದ ಪ್ರತೀಕವಾಗಿದ್ದು, ಮಹದೇಶ್ವರ ಮುಂತಾದ ದೇವಾಲಯಗಳಲ್ಲಿ ಈ ಸಂಪ್ರದಾಯವಿದೆ. ನಂದಿ ಧ್ವಜದ ಉಗಮಕ್ಕೆ ಪೌರಾಣಿಕ ಹಿನ್ನೆಲೆಯೂ ಇದೆ. ಶಿವನನ್ನು ಪೂಜಿಸುವಾಗ ಆತನ ವಾಹನ ನಂದಿಯನ್ನು ಮೆರೆಸುವುದು ಇದರ ಉದ್ದೇಶ ಎಂದು ಕೆಲವರು ಹೇಳುತ್ತಾರೆ. ನಂದಿ ಕಂಬವನ್ನು ನಂದಿಧ್ವಜ, ನಂದಿಕೋಲು, ಬಿರಡೆಕಂಬ ಎಂದೆಲ್ಲಾ ಕರೆಯುತ್ತಾರೆ. ಸಾಧಾರಣವಾಗಿ ಹದಿನೈದರಿಂದ ಮೂವತ್ತೈದು ಅಡಿಗಳ ಉದ್ದವಿರುತ್ತದೆ. ಕಂಬದ ಒಂದೊಂದು ಮೊಳವು ಧರ್ಮದ ಸಂಕೇತವೆಂದು ಭಾವಿಸುತ್ತಾರೆ. ಈ ಗ್ರಾಮದಲ್ಲಿ ಜರುಗುವ ಹಬ್ಬ, ಉತ್ಸವಗಳ ಮುಂದೆ ನಂದಿಕೋಲು ಹೊತ್ತು ಕುಣಿಯುವುದು ಪದ್ಧತಿ ಅಲ್ಲದೆ ಮದುವೆ ಮುಂತಾದ ಮಂಗಳ ಕಾರ್ಯಗಳಲ್ಲಿಯೂ ನಂದಿ ಕಂಬ ಹೊತ್ತು ಕುಣಿಯುವುದು ಸಂಪ್ರದಾಯ.

ನಂದಿಕೋಲನ್ನು ಹೊತ್ತು ಕುಣಿಯುವ ಕಲಾವಿದರು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ವೀರಗಾಸೆ ಹಾಕಿಕೊಳ್ಳುತ್ತಾರೆ. ಒಂದು ಮಂದವಾದ ದಟ್ಟಿಯನ್ನು ಕತ್ತಿಗೆ ಹಾಕಿಕೊಳ್ಳುವುದು ಪದ್ಧತಿ. ಇದು ನಾಲ್ಕು ಅಡಿ ಉದ್ದವಿದ್ದು ಕತ್ತಿನ ಹತ್ತಿರ ಅಗಲವಾದ ಪಟ್ಟಿಯನ್ನು ಹೊಂದಿದ್ದು ನಡುವಿನಿಂದ ಕೆಳಭಾಗಕ್ಕೆ ಸುಮಾರು ಎರಡು ಅಡಿಗಳಷ್ಟು ಕೊಳವೆ ಆಕಾರವನ್ನು ಪಡೆದಿರುತ್ತದೆ. ನಂದಿಕಂಬ ಹೊತ್ತು ಕುಣಿಯುವವನು ಆ ಕೊಳವೆಯಾಕಾರದ ಚೀಲದಲ್ಲಿ ನಂದಿ ಕಂಬವನ್ನು ಇಟ್ಟುಕೊಂಡು ತನ್ನ ಎರಡು ಕೈಯಲ್ಲಿ ಕಂಬ ಹಿಡಿದುಕೊಂಡು ತನ್ನ ಎಲ್ಲಾ ದೃಷ್ಟಿಯನ್ನು ನಂದಿ ಕಂಬದ ಮೇಲ್ಭಾಗದತ್ತ ಕೇಂದ್ರೀಕರಿಸಿ ಕುಣಿತ ನಡೆಸುತ್ತಾನೆ.

ಈ ಕಲೆಗೆ ಡೋಲು, ಓಲಗ, ಮೋರಿ, ಶೃತಿ ಮತ್ತು ಕೈತಾಳ ಹಿನ್ನೆಲೆ ವಾದ್ಯಗಳಾಗಿ ಕುಣಿತಕ್ಕೆ ಮೆರಗು ನೀಡುತ್ತವೆ. ಜನಪದ ಶಕ್ತಿ ಚಾಕಚಕ್ಯತೆಗೆ ಈ ಕುಣಿತ ದ್ಯೋತಕವಾಗಿದೆ.

**ಒ) ಬೀರ ದೇವರ ಕುಣಿತ:** ಈ ಕುಣಿತದಲ್ಲಿ ದೇವರಿಗೆ ಸಂಬಂಧ ಪಟ್ಟವರು ಮಾತ್ರ ಭಾಗವಹಿಸುತ್ತಾರೆ. ವೃತ್ತಾಕಾರವಾಗಿ ಕುಣಿತ ಮಾಡುವವರ ಮಧ್ಯೆ ಬೀರದೇವರನ್ನು ಹೊತ್ತು ಕುಣಿಯುವ ತಮ್ಮಡಿ ಮಾತ್ರ ವೀರಗಾಸೆ, ಮೈಗೆ ಕುಪ್ಪಸ, ನಡುವಿಗೆ ಡಾಬು, ಎದೆಗೆ ಶಲ್ಯ, ತಲೆಗೆ ಪಾಗು, ಕಾಲಿಗೆ ಗೆಜ್ಜೆಗಳನ್ನು ಧರಿಸಿಕೊಳ್ಳಬೇಕು. ಅವನನ್ನು ಸುತ್ತುವರೆದು ಕುಣಿವವರು ಕಾಲಿಗೆ ಗೆಜ್ಜೆಗಳನ್ನಷ್ಟೇ ಕಟ್ಟಿಕೊಂಡಿರುತ್ತಾರೆ.

ಬೀರದೇವರನ್ನು ಹೊತ್ತುಕೊಂಡು ಮಧ್ಯೆ ಒಬ್ಬ ತಮ್ಮಡಿಯು ಕುಣಿತಮಾಡಿದರೆ ಅವನ ಸುತ್ತಲೂ ಹತ್ತು-ಹದಿನೈದು ಮಂದಿ ಗೆಜ್ಜೆ ಕಟ್ಟಿಕೊಂಡು ಕುಣಿತ ಮಾಡುತ್ತಾರೆ. ಹೀಗೆ ಕುಣಿಯುವಾಗ ಚಕ್ರಾದಿ ಬಳೆಯ ಜೊತೆಗೆ ಕೊಂಬು ಕಹಳೆಯನ್ನು ಊದುವುದುಂಟು. ಮೆರವಣಿಗೆ ಸಾಗುತ್ತಿರುವಾಗ ಕುಣಿತದವರು ಎರಡು ಸಾಲಾಗಿ ಕುಣಿಯುತ್ತಾ ಹೋಗುತ್ತಿದ್ದರೆ ಬೀರದೇವರನ್ನು ಹೊತ್ತ ತಮ್ಮಡಿ ಅವರ ಮಧ್ಯೆ ಹೋಗುತ್ತಿರುತ್ತಾನೆ. ಉತ್ಸವ ನಿಂತಾಗ ವೃತ್ತಾಕಾರವಾಗಿ ಸೇರಿ ಕುಣಿತ ಮಾಡುತ್ತಾರೆ. ಕುಣಿತ ಮಾಡುವಾಗ ಪದ ಹೇಳುವ ಸಂಪ್ರದಾಯ ಕಂಡುಬರುವುದಿಲ್ಲ.

ಇಷ್ಟಾದರೂ ಇಲ್ಲಿ ಪ್ರಸ್ತಾಪಿಸಿದ ಕೆಲವು ವಿಶಿಷ್ಟ ಜನಪದ ಕಲೆಗಳು ಇಲ್ಲಿಯ ಜನರ ಬದುಕಿಗೆ ಅನಿವಾರ್ಯವಾಗಿದ್ದು, ಅವುಗಳ ಮಹತ್ವ ವಿಶಿಷ್ಟವಾದುದ್ದಾಗಿದೆ. ಜನಪದ ಕಲೆಗಳಿಂದ

೧) ಕಲಾವಿದರಲ್ಲಿ ಪರಸ್ಪರ ಸಹಕಾರ ಮನೋಭಾವನೆಯನ್ನು ಕಾಣಬಹುದು.

೨) ಇವು ಜಾತಿಮತಗಳ, ಮೇಲು ಕೀಳುಗಳ ಅಂತರಗಳನ್ನು ನಿವಾರಿಸಿ ಬದುಕಿನಲ್ಲಿ ಸೌಹಾರ್ದತೆಯನ್ನು ಸಾಧಿಸುತ್ತವೆ.

೩) ಜನಪದ ಜೀವನದಲ್ಲಿ ಕಣ್ಮರೆಯಾಗುತ್ತಿರುವ ರಸಿಕತೆಯನ್ನು ಚೇತರಿಸಿಕೊಳ್ಳಲು, ಜೀವನ ಸೌಂದರ್ಯ ಬೆಳಗಲು ಇವು ಸಾಧನವಾಗಿವೆ.

೪) ಇವು ಗ್ರಾಮೀಣ ಜೀವನದ ಚೈತನ್ಯದ ಚಿಲುಮೆಗಳಾಗಿವೆ. ಜನರ ನಿರುತ್ಸಾಹ, ಆಲಸಿಕೆಗಳನ್ನು ದೂರ ಮಾಡುತ್ತವೆ. ಅಷ್ಟೇ ಅಲ್ಲದೇ ಗ್ರಾಮೀಣ ಜೀವನದಲ್ಲಿ ಸಾಮರಸ್ಯ ಸಾಧಿಸುತ್ತವೆ.

೫) ಹಾಗೂ ಯವಜನರಲ್ಲಿ ಉತ್ತಮ ಅಭಿರುಚಿಯನ್ನು ಬೆಳೆಸಲು ಸಹಾಯಕವಾಗಿವೆ.

೬) ಜನಪದ ಹಾಡು, ಕಲೆ, ನೃತ್ಯ ಪ್ರಾಕಾರ ಆ ಸ್ಥಳದ ಜನರ ಸಂಸ್ಕೃತಿಯನ್ನು ತಿಳಿಸುವಂತದ್ದಾಗಿರುತ್ತದೆ.

೭) ಮಾನಸಿಕ, ದೈಹಿಕ ಆರೋಗ್ಯಕ್ಕೆ ಸಹಕಾರಿ.

೮) ದೈಹಿಕ ಕಸರತ್ತಿಗೂ ಇದು ನಾಂದಿಯಾಗಿರುತ್ತದೆ.

ಒಟ್ಟಿನಲ್ಲಿ ಜನಪದ ಕಲೆಯ ಮುಖ್ಯ ಲಕ್ಷಣ ಪ್ರಾದೇಶಿಕತೆ. ಇದು ದೇಶ ಭಾಷೆಗಳಿಗೂ ಅನ್ವಯವಾಗುವ ಅಂಶ. ಭೌಗೋಳಿಕ ಹಿನ್ನೆಲೆ, ಭಾಷಿಕ ವೈಶಿಷ್ಟ್ಯ ಮತ್ತು ಸಂಸ್ಕೃತಿಯನ್ನು ಈ ಮೂಲಕ ಗುರುತಿಸಲು ಸಾಧ್ಯವಿದೆ.

**೨) ಆಹಾರ ಪದ್ಧತಿ:**

ಇಲ್ಲಿಯ ಜನರು ತಾವು ಬೆಳೆದ ರಾಗಿ ಮತ್ತು ಜೋಳವನ್ನು ಹೆಚ್ಚಿನ ಪ್ರಮಾಣದಲ್ಲಿ ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಲಿಂಗಾಯಿತರ ಜನಾಂಗದ ಹೊರತಾಗಿ ಉಳಿದೆಲ್ಲಾ ಜನಾಂಗದವರು ಮಿಶ್ರ ಆಹಾರವನ್ನು ಬಳಸುತ್ತಾರೆ. ಕೆಲವೊಂದು ಹಬ್ಬ ಹರಿದಿನಗಳಲ್ಲಿ ದೇವರಿಗೆ ಬಲಿಕೊಟ್ಟ ಕುರಿ, ಕೋಳಿ ಮುಂತಾದ ಪ್ರಾಣಿಗಳ ಮಾಂಸವನ್ನು ತಿನ್ನುತ್ತಾರೆ. ಅಲ್ಲದೆ ಕೆಲವು ಸೊಪ್ಪುಗಳಾದ ಕೀರೆ ಸೊಪ್ಪು, ದಂಟು, ಪಾಲಕ್, ಸಬಸೀಗೆ ಸೊಪ್ಪುಗಳ ಜೊತೆಗೆ ಹೊಲಗಳಲ್ಲಿ ದೊರೆಯುವ ಬೆರಿಕೆ ಸೊಪ್ಪುಗಳನ್ನು ಬಳಸುತ್ತಾರೆ. ಹಬ್ಬ ಹರಿದಿನಗಳಲ್ಲಿ ಮತ್ತು ವಿಶೇಷ ದಿನಗಳಲ್ಲಿ ಕೆಲವು ತಿಂಡಿಗಳಾದ ಹೋಳಿಗೆ, ರವೆ ಉಂಡೆ, ಕಜ್ಜಾಯ, ಚಕ್ಕುಲಿ, ಕರ್ಜಿಕಾಯಿ ಮುಂತಾದ ತಿಂಡಿ ತಿನಿಸುಗಳನ್ನು ತಯಾರಿಸುತ್ತಾರೆ. ಮಾನವನಿಗೆ ಮೂಲಭೂತವಾಗಿ ಆಹಾರ, ನೀರು ಮತ್ತು ಗಾಳಿ ಅವಶ್ಯಕವಾದವುಗಳು. ಇವುಗಳಲ್ಲಿ ಒಂದು ಇಲ್ಲದಿದ್ದರೂ ಯಾರೇ ಆಗಲೀ ಬದುಕಲು ಸಾಧ್ಯವಿಲ್ಲ. ಇಲ್ಲಿಯ ಜನರು ಹೆಚ್ಚಿನ ಪ್ರಮಾಣದಲ್ಲಿ ರಾಗಿಯನ್ನು ಬಳಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಇದು ಮರೆಯಾಗುತ್ತಿದ್ದು, ಆರ್ಥಿಕವಾಗಿ ಮುಂದುವರೆದಂತೆ ಕೆಲವು ವಿಶಿಷ್ಟ ಬಗೆಯ ನಗರ ಪ್ರದೇಶದಲ್ಲಿನ ಆಹಾರ ಪದ್ಧತಿಗಳಿಗೆ ಮಾರುಹೋಗುತ್ತಿದ್ದಾರೆ. ಜನಪದ ಅಡುಗೆ ಸಮಗ್ರ ಜಾನಪದದ ಒಂದು ಪ್ರಮುಖ ಅಂಗ. ಜಾನಪದ ಸಾಹಿತ್ಯಕ ಬಗೆಗಳಾದ ಕಥೆ, ಗೀತೆ, ಗಾದೆ, ಒಗಟುಗಳ ಬಗೆಗೆ, ಭಾಷಿಕ ಬಗೆಗಳಾದ ನಂಬಿಕೆ. ಆಚರಣೆಗಳ ಬಗೆಗೆ, ಅವುಗಳನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸುವ ಕೆಲಸ ನಡೆದರೂ ಸಹ, ಕ್ರಿಯಾತ್ಮಕ

ಬಗೆಗಳಲ್ಲೊಂದಾದ ಜನಪದ ಅಡುಗೆಯ ಬಗೆಗೆ ಇದುವರೆವಿಗೂ ಒಂದು ಕೃತಿ ಲೇಖನ ಬಾರದಿರುವುದು ದುರ್ದೈವದ ಸಂಗತಿ. ಈ ವಿಶಿಷ್ಟ ಪ್ರಕಾರದ ಬಗ್ಗೆ ಆಗಬೇಕಾದ ಕೆಲಸವನ್ನು ಒತ್ತಿ ತೋರಿಸುತ್ತದೆ.

**೩) ಪ್ರದರ್ಶನ ಕಲೆಗಳು:**

ಜನಪದ ಹಾಡು ಕುಣಿತಗಳ ಜಲಮೂಲ ನಮ್ಮ ಅನಕ್ಷರಸ್ಥ ಗ್ರಾಮೀಣರ ಅಂತರಂಗ. ಅವು ಬೆಳೆದುದು ಲೋಕಕ್ಕೆ ಅನ್ನವನ್ನು ದೊರಕಿಸುವ ರೈತರ ಅಂಗಳದಲ್ಲಿ. ನಮ್ಮ ಜನಪದರ ಬದುಕಿಗೆ ಹುಟ್ಟಿದ ಪರಿಸರವೇ ಶಾಲೆ, ಪಟ್ಟ ಅನುಭವವೇ ಗುರು ಎನ್ನಬಹುದು. ಶಿಷ್ಟ ಸಂಸ್ಕೃತಿಗೆ ಮೂಲ ಬೇರಾದ ಜನಪದರಲ್ಲಿ ಅನೇಕ ಕಲೆಗಳು ಅಡಗಿರುತ್ತವೆ. 'ಹಾಡ್ತಾ ಹಾಡ್ತಾ' ರಾಗ ಎನ್ನುವಂತೆ ಪ್ರತಿಯೊಬ್ಬರಲ್ಲೂ ಒಂದಲ್ಲ ಒಂದು ರೀತಿಯ ಪ್ರತಿಭೆಯನ್ನು ಹೊಂದಿರುತ್ತಾರೆ. ಉತ್ತನಹಳ್ಳಿಯಲ್ಲಿ ಮನರಂಜನೆ–ಗೋಸ್ಕರ ಪೌರಾಣಿಕ ನಾಟಕಗಳನ್ನು ಆಡುತ್ತಾರೆ. ಇಲ್ಲಿ ಅಭಿನಯಿಸುವ ಕೆಲವು ಪೌರಾಣಿಕ ನಾಟಕಗಳೆಂದರೆ ದಕ್ಷಬ್ರಹ್ಮ, ವಿರಾಟಪರ್ವ, ಶನಿಮಹಾತ್ಮೆ, ಸತ್ಯ ಹರಿಶ್ಚಂದ್ರ, ಸತಿಸಾವಿತ್ರಿ, ಸಂಪೂರ್ಣ ರಾಮಾಯಣ ಮುಂತಾದವು. ಇವುಗಳಲ್ಲದೆ ಕೆಲವು ಸಾಮಾಜಿಕ ನಾಟಕಗಳನ್ನು ಯುವಕರು ಅಭಿನಯಿಸುತ್ತಾರೆ. ಅವುಗಳೆಂದರೆ ಸೊಸೆ ತಂದ ಸೌಭಾಗ್ಯ, ಬಳ್ಳಿ ಬಾಡಿತು ಹೂವು ಅರಳಿತು, ಕಿವುಡ ಮಾಡಿದ ಕಿತಾಪತಿ, ರತ್ನಮಾಂಗಲ್ಯ, ಸೌಂದರ್ಯ ಸೇಡು ಮುಂತಾದವು.

ಆದರೆ ಇತ್ತೀಚಿನ ದಿನಗಳಲ್ಲಿ ಸಮೂಹ ಮಾಧ್ಯಮಗಳಿಗೆ ಹತ್ತಿರವಾದ ಜನರು ಇಂತಹ ಕಲೆಗಳನ್ನು ಮರೆತಿದ್ದಾರೆ. ಎಲ್ಲೋ ಬೆರಳಣಿಕೆಯಷ್ಟು ಜನರು ಮಾತ್ರ ಇಂತಹ ಕಲೆಗಳನ್ನು ಪ್ರದರ್ಶಿಸುತ್ತಿರುವುದು ಬೇಸರ ತಂದರೂ, ಕಾಲದ ಪ್ರಭಾವಕ್ಕೆ ಮಣಿಯಲೇ ಬೇಕಾಗುತ್ತದೆ.

**೪) ಉಡುಗೆ–ತೊಡುಗೆ:**

ಪ್ರಾಚೀನ ಕಾಲದಲ್ಲಿ ಮಾನವ ತನ್ನ ದೇಹ ರಕ್ಷಿಸಿಕೊಳ್ಳಲು ಕೆಲವು ಮರದ ತೊಗಟೆ ಮತ್ತು ಎಲೆಗಳನ್ನು ಬಳಸುತ್ತಿದ್ದನು. ಕಾಲ ಬದಲಾದಂತೆ ತನ್ನ ಬುದ್ಧಿಯ ವಿಕಾಸವಾದಂತೆಲ್ಲಾ ಈ ಮನುಷ್ಯ ವಿವಿಧ ರೀತಿಯ ಬಟ್ಟೆಗಳನ್ನು ಧರಿಸುವುದಕ್ಕೆ ಪ್ರಾರಂಭಮಾಡಿದ. ಆದರೆ ಇತ್ತೀಚಿನ ದಿನಗಳಲ್ಲಿ ಉಡುಪಿನಲ್ಲೂ ನಾನಾ ಬಗೆಯ ವಸ್ತ್ರವೈವಿಧ್ಯವನ್ನು ಕಾಣಬಹುದಾಗಿದೆ. ಉತ್ತನಹಳ್ಳಿಯಲ್ಲಿ ಹಿಂದೆ ಹೆಂಗಸರು ಮೈತುಂಬ ರವಿಕೆ ಮತ್ತು ಸೀರೆಗಳನ್ನು ಧರಿಸುತ್ತಿದ್ದರು. ಗಂಡಸರು ನಿಕ್ಕರ್ (ಪಟಾಪಟಿ ಚಡ್ಡಿ)

ಮತ್ತು ಅಂಗಿಯನ್ನು ಧರಿಸುತ್ತಿದ್ದರು. ಈ ಉಡುಗೆ ತೊಡಿಗೆಗಳು ಕಾಲ ಬದಲಾದಂತೆ ಬದಲಾವಣೆಯಾದವು.

ಬಹಳ ಹಿಂದೆ ಮೈತುಂಬಾ ಬಟ್ಟೆತೊಟ್ಟು ಸಡಗರಿಸುತ್ತಿದ್ದ ಜನರು ಇತ್ತೀಚೆಗೆ ಬಟ್ಟೆಗಳನ್ನು ಹಾಕುವ ಶೈಲಿಯನ್ನು ನೋಡಿದರೆ ಅಸಹ್ಯ ಎನಿಸುವಂತಿದೆ. ಆಧುನಿಕ ಉಡುಪು ಹಳ್ಳಿಯಲ್ಲೂ ಇತ್ತೀಚಿನ ದಿನಗಳಲ್ಲಿ ಕಾಣಿಸುತ್ತಿದೆ. ಆಧುನಿಕತೆಯ ಮೊರೆಹೋಗಿರುವ ಕೆಲವು ಹೆಂಗಸರು, ಕಾಲೇಜು ಹುಡುಗ ಹುಡುಗಿಯರು ವಿವಿಧ ರೀತಿಯ ಉಡುಗೆಗಳನ್ನು ಧರಿಸುತ್ತಿದ್ದಾರೆ. ಹಿಂದೆ ಹೆಣ್ಣುಮಕ್ಕಳು ಲಂಗ ಮತ್ತು ಧಾವಣಿಯನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಆದರೆ ಕಾಲ ಬದಲಾದಂತೆ ಚೂಡಿದಾರ, ಮಿಡಿ, ಲಾಂಚ, ನೈಟಿ, ಫ್ರಾಕ್ ಮುಂತಾದ ಉಡುಗೆಗಳನ್ನು ಬಳಸುತ್ತಿದ್ದಾರೆ. ಅಂತೆಯೇ ಹಿಂದೆ ಹುಡುಗರು ಪದವಿಪೂರ್ವ ಶಿಕ್ಷಣದವರೆಗೂ ಚಡ್ಡಿಯಲ್ಲೇ ವಿದ್ಯಾಭ್ಯಾಸ ಮಾಡುತ್ತಿದ್ದರು. ಆದರೆ ಇಂದಿನ ಯುವಕರು ವಿವಿಧ ರೀತಿಯ ಬಣ್ಣಬಣ್ಣದ ಬಟ್ಟೆಗಳನ್ನು ತೊಟ್ಟು ಕಾಲೇಜಿಗೆ ಹೋಗುತ್ತಿರುವುದನ್ನು ಕಾಣಬಹುದಾಗಿದೆ. ಆರ್ಥಿಕವಾಗಿ ಮುಂದುವರೆದಿರುವವರು ಹೆಚ್ಚಿನ ದರದ ಬಟ್ಟೆಯನ್ನು ಧರಿಸುತ್ತಾರೆ. ಆರ್ಥಿಕವಾಗಿ ಹಿಂದುಳಿದವರು ಕಡಿಮೆ ದರದ ಬಟ್ಟೆಯನ್ನು ಧರಿಸುವುದು ರೂಢಿಯಲ್ಲಿದೆ. ಉಡುಪುಗಳು ಭಾರತದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಭಾರತದ ಯಾವುದೇ ನಾರಿ ಮೈ ತುಂಬ ಸೆರುಗು ಹೊದ್ದು ಹಣೆತುಂಬ ಕುಂಕುಮ ಇಟ್ಟರೆ ಅವಳನ್ನು ಪೂಜ್ಯ ಭಾವನೆಯಿಂದ ನೋಡುವುದನ್ನು ಹಿಂದಿನಿಂದಲೂ ಕಾಣಬಹುದಾಗಿದೆ.

ಒಡವೆಗಳನ್ನು ಧರಿಸುವುದರಲ್ಲಿ ಇಲ್ಲಿನ ಜನರು ಒಂದು ಕೈ ಮೇಲೆ ಎಂದು ಹೇಳಬಹುದು. ಇಲ್ಲಿನ ಗಂಡಸರು ಧರಿಸುವ ಒಡವೆಗಳೆಂದರೆ ಉಂಗುರ, ವಾಚು, ಚಿನ್ನದ ಸರಗಳನ್ನು ಧರಿಸುತ್ತಾರೆ. ಹಿಂದೆ ಗಂಡಸರು ಸಹ ಓಲೆಗಳನ್ನು ಧರಿಸುತ್ತಿದ್ದರು ಎಂಬುದಕ್ಕೆ ಸಾಕ್ಷಿಯಾಗಿ ಕೆಲವು ಹಿರಿಯರನ್ನು ಕಾಣಬಹುದಾಗಿದೆ. ಹೆಂಗಸರು ಓಲೆ, ಮೂಗುತಿ, ಲೋಲಾಕು, ಕೆನ್ನೆಸರ, ನಡು ಡಾಬು, ಕೈ ಕಡಗ, ಬೆರುಳುಂಗುರ, ಕಾಲುಂಗುರ, ಕಾಲ್ಚೈನು ಮದುವೆಯಾಗಿದ್ದರೆ ಮಾಂಗಲ್ಯ ಮುಂತಾದವುಗಳು ಇವರು ಧರಿಸುವ ಒಡವೆಗಳಾಗಿವೆ.

೫) ಜನಪದ ವೈದ್ಯ:

ನಮ್ಮಲ್ಲಿ ಈಗಿರುವ ಆಸ್ಪತ್ರೆ, ವೈಜ್ಞಾನಿಕ ಸಲಕರಣೆಗಳು, ವಿದ್ಯಾವಂತ ಪದವೀಧರ ವೈದ್ಯರು ನಮ್ಮ ಪೂರ್ವಿಕರ ಕಾಲದಲ್ಲಿ ಇರಲಿಲ್ಲ. ಆಗ ರೋಗ

ನಿವಾರಣೆಗೆ ಹಳ್ಳಿ ಔಷಧಿ, ನಾಟಿ ಔಷಧಿ, ಕಾಡುಮದ್ದು ಇತ್ಯಾದಿ ಹೆಸರುಳ್ಳ ಔಷಧಿಯನ್ನು ಬಳಸುತ್ತಿದ್ದರು. ಇದನ್ನು ಜನಪದ ವೈದ್ಯ ಎಂದು ಕರೆಯುತ್ತಾರೆ. ಈ ಔಷಧಿ ತಯಾರಿಕೆಗೆ ತನ್ನ ಸುತ್ತಮುತ್ತಲು ಸಿಗುವ ಅರಳಿ, ಬೇವು, ತೆಂಗು, ನಿಂಬೆ, ತುಳಸಿ, ವೀಳ್ಯೆದೆಲೆ, ಏಲಕ್ಕಿ, ಈರುಳ್ಳಿ, ಬೆಳ್ಳುಳ್ಳಿ, ಲವಂಗ, ಜೀರಿಗೆ, ಮೆಣಸು ಇತ್ಯಾದಿ ಪದಾರ್ಥಗಳನ್ನು ಬಳಸಿ ಖಾಯಿಲೆಗಳನ್ನು ವಾಸಿ ಮಾಡಿಕೊಳ್ಳುತ್ತಿದ್ದರು. ಪ್ರಾಚೀನ ಕಾಲದಲ್ಲಿ ಕೆಲವು ಕಾಯಿಲೆಗಳಿಗೆ ಕಾಡಿನಲ್ಲಿ ಸಿಗುತ್ತಿದ್ದ ಔಷಧಿಯ ಸಸ್ಯಗಳಿಂದ ನಮ್ಮ ಜನಪದರು ಗುಣಪಡಿಸುತ್ತಿದ್ದರು. ಇಂದಿಗೂ ಕೈಕಾಲುಗಳು ಉಳುಕಿದರೆ ಉಳುಕಿನ ಸೊಪ್ಪನ್ನು ತೀಡುವುದನ್ನು ನೋಡಿದರೆ ವೈಜ್ಞಾನಿಕವಾಗಿ ಎಷ್ಟೇ ಮುಂದುವರೆದಿದ್ದರೂ ಕೆಲವೊಂದು ವಿಷಯಗಳನ್ನು ಜನಪದರಿಂದಲೇ ತಿಳಿಯಬೇಕಾಗುತ್ತದೆ. ಪ್ರಾಣಿಗಳು ಲಘು ತಪ್ಪಿದರೆ, ಕಾಲುಗಳನ್ನು ಮುರಿದುಕೊಂಡರೆ ಜನಪದರೆ ಅದನ್ನು ನಿವಾರಿಸುವ ನಿಟ್ಟಿನಲ್ಲಿ ಹಲವು ಔಷಧಿ ಸೊಪ್ಪುಗಳನ್ನು ಬಳಸುತ್ತಾರೆ. ಹಸು ಮತ್ತು ಹೆಮ್ಮೆಗಳಿಗೆ ನಾಗೇರು ಆದರೆ ಅದನ್ನು ಕೆಡವಿ ನಾಲಿಗೆಯಿಂದ ಕೆಟ್ಟ ನೀರು ಹೋಗುವಂತೆ ಮಾಡಿ ಉಪ್ಪಿನಿಂದ ನಾಲಿಗೆಯನ್ನು ತೊಳೆಯುತ್ತಾರೆ. ಅಂತೆಯೇ ಮನುಷ್ಯರಿಗೂ ಸಹ ಕೈಕಾಲುಗಳು ಮುರಿದುಕೊಂಡರೆ ಬಿದಿರಿನ ಅಚ್ಚೆಯಿಂದ ಸುತ್ತಲೂ ಪಟ್ಟಿಹಾಕಿ ಔಷಧಿಯನ್ನು ಹಚ್ಚಿ ಕೆಲವು ದಿನಗಳ ಕಾಲ ಎಚ್ಚರಿಕೆಯಿಂದ ನೋಡಿಕೊಂಡರೆ ಮತ್ತೇ ಅದು ಕೂಡಿಕೊಳ್ಳುವಂತೆ ಮಾಡುವ ಕಲೆಯನ್ನು ಜನಪದರು ಹೊಂದಿದ್ದಾರೆ. ಹಾವು ಕಡಿದರೆ, ಚೇಳು ಕಡಿದರೆ ಮತ್ತು ನಾಯಿ ಕಡಿದರೆ, ಜನಪದರು ಮನೆ ಔಷಧಿಯನ್ನೇ ಇಂದಿಗೂ ಬಳಸುವುದನ್ನು ನೋಡಬಹುದು. ಹೀಗೆ ಗ್ರಾಮೀಣರ ಬದುಕು ಪೂರ್ಣವಾಗಿ ನೈಸರ್ಗಿಕವಾಗಿದ್ದು ಅವರ ಪಾಲಿಗೆ ಪ್ರಕೃತಿಯೇ ಸಂಜೀವಿನಿಯಾಯಿತು. ಸಸ್ಯ ಮೂಲಿಕೆಗಳಿಂದ ತಯಾರಿಸಿದ ಔಷಧಿಯಿಂದ ರೋಗ ನಿವಾರಣೆಯಾಗದಿದ್ದರೆ ದೇವರು, ಮಂತ್ರ, ಮಾಟ, ಧಾರ್ಮಿಕ ಆಚರಣೆ, ಸಂಪ್ರದಾಯ ಮತ್ತು ಇತರೆ ನಂಬಿಕೆಗಳಿಂದ ಗುಣಪಡಿಸುತ್ತಿದ್ದರು. ಜನಪದ ವೈದ್ಯರಿಂದ ರೋಗ ನಿವಾರಣೆ ಮಾತ್ರವಲ್ಲದೆ ಬಂಜೆತನವನ್ನು ಹೋಗಲಾಡಿಸುವ ಪದ್ಧತಿಯಿತ್ತು.

**೬) ಮಾಟ-ಮಂತ್ರ:**

"ನಿಸರ್ಗವೆನ್ನುವುದು ಮಾನವನಿಗೆ ವಿಶಿಷ್ಟ ಅನುಭವದ ಕೇಂದ್ರ. ಇದರ ವಿಕೋಪಗಳೊಂದಿಗೆ ನಿರಂತರ ಹೋರಾಟ ನಡೆಸಿ ಬಾಳಬೇಕಾದ ಅನಿವಾರ್ಯತೆಯಿದ್ದ ಆದಿಮಾನವನು ಸೃಷ್ಟಿ ವೈಚಿತ್ರ್ಯದ ಹಿಂದೆ ಅತಿಮಾನುಷ ಶಕ್ತಿಯ ಅಸ್ತಿತ್ವವನ್ನು ಕಲ್ಪಿಸಿಕೊಂಡು ಅದರಲ್ಲಿ ಗಾಢನಂಬಿಕೆ ಬೆಳಸಿಕೊಂಡು, ತನ್ನನ್ನು ಕಾಪಾಡುವ ಗಾಳಿ,

ನೀರು, ಆಹಾರದಂತಹ ಬದುಕಿನ ಮೂಲಭೂತ ಅಗತ್ಯಗಳನ್ನು ಪೂರೈಸಲು ನೆರವಾಗುವ ಅಗೋಚರ ಅತಿಮಾನುಷ ಶಕ್ತಿಗೆ ವಿನೀತ ಭಾವದಿಂದ ದೇವರೆಂದು ಕರೆದು ಗೌರವಿಸಿದ. ದೇವರ ಸ್ತುತಿಗೆ ಪೂಜ್ಯತೆಗೆ ಅರ್ಹವಾದರೆ ದೆವ್ವ ವಿಕೃತಿಗೆ ದ್ಯೋತಕ. ದೇವರು ಮಂಗಳಕರವಾದ ಧವನ ಕೀರ್ತಿಯ ಸಂಕೇತವಾದರೆ ದೆವ್ವ ಕುಪ್ರಸಿದ್ಧಿಯ ಸಂಕೇತ."

ಅಂತೆಯೇ ಉತ್ತನಹಳ್ಳಿಯ ಕಾರ್ಗಳಮ್ಮನ ದೇವಸ್ಥಾನ ಮತ್ತು ಶನಿದೇವರ ದೇವಸ್ಥಾನದಲ್ಲಿ ದೆವ್ವ ಹಿಡಿದವರಿಗೆ ಮಂತ್ರ ಹಾಕಿಬಿಡಿಸುತ್ತಾರೆ. ದೆವ್ವಗಳಲ್ಲಿ ಹೆಣ್ಣು ಗಂಡು ಎಂದು ಜನಪದರು ಲಿಂಗ ಬೇಧ ಕಲ್ಪಿಸಿದ್ದಾರೆ. ಹೆಣ್ಣು ದೆವ್ವ ಪುರುಷನನ್ನು, ಪುರುಷ ದೆವ್ವ ಸ್ತ್ರೀಯನ್ನು ಹಿಡಿದರೆ ಅಗಲಿಸುವುದು ಕಷ್ಟವೆಂದು ಹೇಳುತ್ತಾರೆ. ದೆವ್ವನನ್ನು ಬಿಡಿಸುವಾಗ ರಂಗೋಲಿ ಹರಿಸಿನ, ಕುಂಕುಮ, ಹಿಟ್ಟಿಗೆ ಪುಡಿಗಳಿಂದ ಮಂಡಲ ಬರೆದು ಅದರ ಮಧ್ಯದಲ್ಲಿ ರೋಗಿಯನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಮಂತ್ರ ಪಠಿಸುತ್ತಾರೆ. ಆನಂತರ ಕೆಂಪು ದಾರದಿಂದ ತಾಯತ ಕಟ್ಟಿ ದೆವ್ವ ಬಿಟ್ಟುದರ ಕುರುಹಾಗಿ ಒಂದೆರಡು ಕೂದಲುಗಳನ್ನು ಕಿತ್ತುಕೊಡುವಂತೆ ಕೇಳುತ್ತಾರೆ.

ಮಕ್ಕಳಿಗೆ ಜ್ವರ ಬಂದರೆ ಬಲಿಯನ್ನು ಹಾಕುತ್ತಾರೆ. ಇದರಲ್ಲಿ ಹಲವು ಬಗೆಗಳಿವೆ. ತೊಪ್ಪೆ ಬಲಿ, ಎಂಜಲು ಬಲಿ ಮತ್ತು ಹಂಚಿಕಡ್ಡಿಯಿಂದ ನೇವಣಿಸುತ್ತಾರೆ. ಈ ಹಳ್ಳಿಯಲ್ಲಿ ಮಾಟಮಾಡುವ ಪರಿಪಾಠವಿಲ್ಲ. ಆದರೆ ಅಲ್ಲಿನ ಜನರು ಕೆಲವು ಕಷ್ಟಗಳಿಗೆ ಗುರಿಯಾದಾಗ ನಮಗೆ ಯಾರೋ ಆಗದವರು ಮಾಟ ಮಾಡಿಸಿದ್ದಾರೆಂದು ನಂಬುತ್ತಾರೆ.

ದೆವ್ವ ಹಿಡಿಯುವಿಕೆಯ ಹಿಂದೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕಾರಣಗಳಿವೆ. ಅನಕ್ಷರತೆ, ಮೂಢನಂಬಿಕೆ ಬಡತನಗಳಿಂದ ಬಸವಳಿದಿರುವ ಸಮುದಾಯಗಳಲ್ಲಿ ದೆವ್ವದ ಪಾತ್ರ ಗಾಢವಾಗಿದೆ. ಮಾನಸಿಕ ದೌರ್ಬಲ್ಯ ಇರುವವರಿಗೆ ಈ ಕಾಟ ಜಾಸ್ತಿ. ಗ್ರಾಮೀಣ ಪ್ರದೇಶದಲ್ಲಿ ಪ್ರಾಯಕ್ಕೆ ಬಂದ ಯುವತಿಯರಲ್ಲಿ, ಪತಿಯ ತಿರಸ್ಕಾರಕ್ಕೆ ಗುರಿಯಾದ ಮಹಿಳೆಯರಲ್ಲಿ, ಅತ್ತೆ ನಾದಿನಿಯರ ಕಿರುಕುಳಕ್ಕೆ ಬಲಿಯಾದ ವಿವಾಹಿತ ತರುಣಿಯರಲ್ಲಿ ದೆವ್ವದ ಕಲ್ಪನೆ ಜಾಸ್ತಿ. ಕಾರಣ ದೆವ್ವದ ಪರಿಕಲ್ಪನೆಯನ್ನು ಬಾಲ್ಯದಿಂದಲೂ ತಲೆಗೆ ತುಂಬುವುದರಿಂದ ಹಾಗೂ ಜೀವನದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿರುವ ದುರ್ಬಲ ಮನೋಭಾವದವರು ತಮ್ಮ ಮನಸ್ಸಿಗೆ ಪರಿಹಾರ ಕಂಡುಕೊಳ್ಳಲು ಅಸಮರ್ಥರಾದಾಗ ತಮ್ಮ ಆಸೆ ಆಕಾಂಕ್ಷೆಗಳನ್ನು ದೆವ್ವ ಹಿಡಿಯಿತೆಂದು

ನಟಿಸಿ ಆ ಮೂಲಕ ತಮ್ಮ ಆಸೆ, ಬೇಡಿಕೆಗಳನ್ನು ಪೂರೈಸಿಕೊಳ್ಳಲು ಯತ್ನಿಸುತ್ತಾರೆ. ದೆವ್ವದ ಹೆಸರಿನಲ್ಲಿ ಶೋಷಣೆಗೂ ಅವಕಾಶವಾಗಿರುವುದನ್ನು ತಳ್ಳಿಹಾಕುವಂತಿಲ್ಲ. ಇಂದು ಜನರು ಸುಶಿಕ್ಷಿತರಾದಂತೆಲ್ಲಾ ದೆವ್ವದ ಭೀತಿ ಕಡಿಮೆಯಾಗುತ್ತಿದ್ದೂ ಈಗ ಹಿಂದಿನಷ್ಟು ದೆವ್ವದ ಕಾಟವಿಲ್ಲವೆಂಬುದು ಹಳ್ಳಿಗಳಲ್ಲಿ ಕಾಣಬರುತ್ತಿರುವ ಸಮಾಧಾನಕರ ಅಂಶ.

**೭) ಜನಪದ ಆಟಗಳು:**

ಆಟಗಳು ಮನರಂಜನೆಯೇ ಪ್ರಧಾನ ಉದ್ದೇಶವಾಗಿ ಬೆಳೆದು ಬಂದಂತವುಗಳು. ಹಿಂದಿನ ಕಾಲದಿಂದಲೂ ಬೆಳೆದುಬಂದ ಹಳ್ಳಿಯ ಆಟಗಳನ್ನೇ ಜನಪದ ಆಟಗಳೆಂದು ಕರೆಯಲಾಗಿದೆ. ಪುರಾತನ ಕಾಲದಿಂದಲೂ ನಾನಾ ಬಗೆಯ ಆಟಗಳನ್ನು ಕಾಣಬಹುದು. ರಾಜ ಮಹಾರಾಜರು ಪಗಡೆ ಆಟ, ಚದುರಂಗ ಆಟ, ಕುಸ್ತಿಪಂದ್ಯ, ಕುದುರೆ ಸವಾರಿ ಆಡುತ್ತಿದ್ದರು. ತಮ್ಮ ಬಾಲ್ಯ, ಯೌವನ ಹಾಗೂ ಮುಪ್ಪಿನಲ್ಲಿಯೂ ಕೂಡ ತಮ್ಮ ವಯಸ್ಸಿಗೆ ತಕ್ಕಂತೆ ಆಟಗಳನ್ನು ಸ್ತ್ರೀಪುರುಷರಿಬ್ಬರೂ ಇಂದಿಗೂ ಕೆಲಮಟ್ಟಿಗೆ ಆಡಿಕೊಂಡು ಬಂದಿದ್ದಾರೆ. ಅಂತೆಯೇ ಉತ್ತನಹಳ್ಳಿಯ ಜನಪದರಲ್ಲಿ ಕಂಡುಬರುವ ಜನಪದ ಆಟಗಳನ್ನು ಹೀಗೆ ಪಟ್ಟಿಮಾಡಬಹುದು.

೧) ಚೌಕಬಾರ ಅಥವಾ ಗಟ್ಟೆ ಮನೆ

೨) ಕಣ್ಣಾಮುಚ್ಚಾಲೆ

೩) ಬುಗುರಿ ಆಟ

೪) ಮರಕೋತಿ ಆಟ

೫) ಅಳಿಗುಳಿ ಮನೆ

೬) ಗೋಲಿ ಆಟ

೭) ಕುಂಟಾಟ

೮) ಹಸು ಹುಲಿ ಆಟ

**೧) ಚೌಕಬಾರ ಅಥವಾ ಗಟ್ಟಲೆ ಮನೆ:**

ಇದು ಸ್ತ್ರೀಯರು, ಪುರುಷರು, ಮಕ್ಕಳು ಹಾಗೂ ಪ್ರತಿಯೊಂದು ವಯೋಮಾನದವರು ಆಡುವ ಒಳಾಂಗಣದ ಆಟವಾಗಿದೆ. ನೆಲದ ಮೇಲೆ

ನಿರ್ದಿಷ್ಟವಾಗಿ ಮನೆಗಳನ್ನು ಬರೆದುಕೊಂಡು ಇಬ್ಬರು ಅಥವಾ ನಾಲ್ಕು ಜನ ಒಟ್ಟಿಗೆ ಸೇರಿ ಆಡಬಹುದಾದ ಆಟವಾಗಿದೆ. ಇದರಲ್ಲಿ ಎರಡು ವಿಧ ಒಂದು ಐದು ಮನೆಯ ಆಟ ಎರಡು ಏಳು ಮನೆ ಆಟ. ಹುಣಸೇ ಬೀಜಗಳನ್ನು ಜಜ್ಜಿ ಬೇಳೆಯನ್ನಾಗಿ ಮಾಡಿ ಅಥವಾ ತೇಯ್ದು ಆಟವಾಡುತ್ತಾರೆ. ಐದು ಮನೆ ಆಟಕ್ಕೆ ನಾಲ್ಕು ಪಿಚ್ಚಿ (ಹುಣಸೇಬೀಜ) ಏಳು ಮನೆ ಆಟಕ್ಕೆ ಆರು ಪಿಚ್ಚಿಗಳನ್ನು ಬಳಸುತ್ತಾರೆ. ಕಪ್ಪು ಬಿದರೆ ಒಂದು ಎಂತಲೂ ಬಿಳಿಭಾಗ ಬಿದ್ದರೆ ನಾಲ್ಕು ಎಂತಲೂ ಸಂಖ್ಯೆಯನ್ನು ಗುರುತಿಸಿ ಹಾಗೆ ಬಿದ್ದ ಸಂಖ್ಯೆಯಷ್ಟು ಕಾಯನ್ನು ನಡೆಸಿಕೊಂಡು ಹೋಗುತ್ತಾರೆ. ಎದುರಾಳಿಯ ಕಾಯಿಯನ್ನು ಹೊಡೆದಾಗ ಮತ್ತೆ ಅವನು ಮೂಲಸ್ಥಳಕ್ಕೆ ಬರಬೇಕು. ಅವನನ್ನು ತಪ್ಪಿಸಿಕೊಂಡು ಕಾಯನ್ನು ಹಣ್ಣು ಮಾಡಿದಾಗ ಆತ ಗೆದ್ದಂತೆ. ಹೀಗೆ ಮನೋರಂಜನೆಯೊಂದಿಗೆ ಚತುರತೆ, ಅದೃಷ್ಟದ ಪರೀಕ್ಷೆಯು ಈ ಆಟದಲ್ಲಿದೆ.

**೨) ಕಣ್ಣಾಮುಚ್ಚಾಲೆ ಆಟ:**

ಕಣ್ಣಾಮುಚ್ಚಾಲೆ ಹೊರಾಂಗಣ ಆಟವಾಗಿದೆ. ಹುಡುಗ ಹುಡುಗಿಯರು ಎಲ್ಲರೂ ಒಟ್ಟಾಗಿ ಸೇರಿ ಆಡುವ ಆಟವಾಗಿದೆ. ಮಕ್ಕಳೆಲ್ಲಾ ಸೇರಿ ಕೈ ಕೈ ಜೋಡಿಸಿ ಚಪ್ಪಾಳೆ ಹಾಕಿ ಸೋತ ಒಬ್ಬರನ್ನು ಮತ್ತೊಬ್ಬರು ಅಜ್ಜಿಯಾಗಿ ಕಣ್ಣು ಮುಚ್ಚಿ ಹಿಡಿದು ಹೀಗೆ ಹೇಳುತ್ತಾರೆ.

ಕಣ್ಣಾಮುಚ್ಚೇ ಕಾಡೇಗೂಡೇ
ಉದ್ದಿನ ಮೂಟೆ ಉರುಳೇ ಹೊಯ್ತು
ನಮ್ಮ ಹಕ್ಕಿ ಬಿಟ್ಟೆ ಬಿಟ್ಟೆ

ನಿಮ್ಮ ಹಕ್ಕಿ ಹಿಡಿದುಕೊಳ್ಳಿ - ಎಂದು ಹೇಳುವಾಗ ಇತರರು ಅವಿತು-ಕೊಳ್ಳಬೇಕು. ಕಣ್ಣು ಮುಚ್ಚಿಸಿಕೊಂಡವನು ಯಾರನ್ನು ಮೊದಲು ನೋಡುತ್ತಾನೋ ಅಥವಾ ಮುಟ್ಟುತ್ತಾನೋ ಆತ ಸೋತಂತೆ. ಹೀಗೆ ನಿರಂತರವಾಗಿ ಆಟ ನಡೆಯುತ್ತದೆ.

**೩) ಬುಗುರಿ:**

ಬುಗುರಿ ಗಂಡು ಮಕ್ಕಳು ಆಡುವ ಆಟ. ಇದನ್ನು ಹೊರಾಂಗಣದಲ್ಲಿಯೂ ಮತ್ತು ಒಳಾಂಗಣದಲ್ಲಿಯೂ ಆಡಬಹುದು. ದುಂಡಾದ ಮರದ ಆಕಾರಕ್ಕೆ ಕೆಳಗೆ ಮೊಳೆಯೊಂದನ್ನು ಒಡೆದಾಗ ಬುಗುರಿ ತಯಾರಾಗುತ್ತದೆ. ಇದನ್ನು ತಿರುಗಿಸಲು ಚಾಟಿ ಅಗತ್ಯವಿದೆ. ಚಾಟಿಯನ್ನು ಬುಗುರಿಯ ಮಳೆಯಿಂದ ಸುತ್ತಿ ನೆಲಕ್ಕೆ ಬಿಟ್ಟರೆ ಬುಗುರಿ ತಿರುಗುತ್ತದೆ. ಬುಗುರಿ ಆಡಿಸದ ಹುಡುಗರೇ ಇಲ್ಲ ಎಂದರೆ ತಪ್ಪಾಗಲಾರದು.

**೪) ಮರಕೋತಿ ಆಟ:**

ಇದು ಕೂಡ ಗಂಡು ಮಕ್ಕಳು ಹೊರಾಂಗಣದಲ್ಲಿ ಆಡುವ ಆಟವಾಗಿದೆ. ಆಟದ ಹೆಸರೇ ಆಟದ ಅರ್ಥವನ್ನು ಸೂಚಿಸುತ್ತದೆ. ಮರಗಳಿಂದ ಮರಗಳಿಗೆ ಕೋತಿಯಂತೆ ನೆಗೆಯುವ ಆಟ ಇದಾಗಿದೆ. ಈ ಆಟದಲ್ಲಿ ಕಳ್ಳನಾದವನು ಹಾಗೂ ಮರದ ತುಂಡನ್ನು ಎಸೆಯುವವನನ್ನು ಬಿಟ್ಟು ಉಳಿದವರೆಲ್ಲಾ ಮರಹತ್ತಿ ಕುಳಿತಿರುತ್ತಾರೆ. ಮರದ ತುಂಡು ಎಸೆಯುವವನು ಓಡಿಹೋಗಿ ಮರಹತ್ತಿ ಕುಳಿತುಕೊಳ್ಳುತ್ತಾನೆ. ಅಷ್ಟರಲ್ಲಿ ಕಳ್ಳನಾದವನು ಆ ಮರದ ತುಂಡನ್ನು ನಿರ್ದಿಷ್ಟ ಸ್ಥಳದಲ್ಲಿಟ್ಟು ಎಸೆದವನನ್ನು ಹಿಡಿಯಬೇಕು. ಹಾಗಾಗ ಬಿದ್ದರೆ ಉಳಿದವರು ಜಿಗಿದು ಮರದ ತುಂಡನ್ನು ಮುಟ್ಟಲು ಪ್ರಯತ್ನಿಸುತ್ತಾರೆ. ಹೀಗೆ ಮುಟ್ಟಿದರೆ ಅವನೇ ಪುನಃ ಕಳ್ಳ, ಇಲ್ಲವಾದರೆ ಆತ ಯಾರನ್ನು ಮುಟ್ಟುತ್ತಾನೋ ಆತನೇ ಕಳ್ಳನಾಗುತ್ತಾನೆ. ಹೀಗೆ ನಿರಂತರವಾಗಿ ಆಟ ಮುಂದುವರೆಯುತ್ತದೆ.

**೫) ಅಳಿಗುಳಿ ಮನೆ ಆಟ:**

ಅಳಿಗುಳಿ ಮನೆ ಒಳಾಂಗಣ ಆಟವಾಗಿದೆ. ಮುಖ್ಯವಾಗಿ ಇದು ಹೆಣ್ಣುಮಕ್ಕಳ ಆಟವಾಗಿದೆ. ಜೊತೆಗೆ ವಯಸ್ಸಾದ ಸ್ತ್ರೀಯರು ಕೂಡ ಈ ಆಟವನ್ನು ಆಡುತ್ತಾರೆ. ಮರದದಿಂದ ಅಥವಾ ಲೋಹದಿಂದ ಈ ಅಳಿಗುಳಿಮನೆ ತಯಾರಾಗಿರುತ್ತದೆ. ಇದರಲ್ಲಿ ಹುಣಸೇ ಬೀಜಗಳನ್ನು ಮನೆಯೊಂದಕ್ಕೆ ಐದು ಬೀಜಗಳಂತೆ ಹಾಕಿ ಆಟವಾಡುತ್ತಾರೆ. ಇದರಲ್ಲಿಯೂ ಇಬ್ಬರು ಆಟಗಾರರಿದ್ದು ಮನೆಯ ಒಂದು ಕಡೆ ಒಬ್ಬರಿಗೆ ಮತ್ತೊಂದು ಭಾಗದಲ್ಲಿ ಇನ್ನೊಬ್ಬರು ಆಟವಾಡುತ್ತಾರೆ.

**೬) ಗೋಲಿ ಆಟ:**

ಗಂಡು ಮಕ್ಕಳು ಆಡುವ ಹೋರಾಂಗಣ ಆಟ ಇದಾಗಿದೆ. ಇಬ್ಬರು ಅಥವಾ ಹೆಚ್ಚು ಜನ ಈ ಆಟದಲ್ಲಿರುತ್ತಾರೆ. ತಮ್ಮ ಗೋಲಿಯಿಂದ ಮತ್ತೊಬ್ಬರ ಗೋಲಿಗೆ ಹೊಡೆದರೆ ಆ ಗೋಲಿಯನ್ನು ಗೆದ್ದ ಹಾಗೆ. ಗೋಲಿ ಆಟದಲ್ಲೂ ನಾನಾ ಬಗೆಗಳಿವೆ.

**೭) ಕುಂಟಾಟ:**

ಇದು ಹೆಣ್ಣು ಮಕ್ಕಳ ಆಟವಾಗಿದ್ದು ಹೊರಾಂಗಣ ಮತ್ತು ಒಳಾಂಗಣದಲ್ಲಿ ಆಡಬಹುದಾದ ಆಟವಾಗಿದೆ. ನೆಲದ ಮೇಲೆ ನಿರ್ದಿಷ್ಟವಾಗಿ ಮನೆಗಳನ್ನು ಬರೆದುಕೊಂಡು ಹೆಂಚಿನ ಬಿಲ್ಲೆಯನ್ನು ಮನೆಗೆ ಹಾಕಿ ಕುಂಟುವುದು ಈ ಆಟದ

ವಿಶೇಷ ಕ್ರಮ. ಈ ಒಂದು ಆಟವನ್ನು ಹೆಣ್ಣುಮಕ್ಕಳು ಆಡುತ್ತಿದ್ದರೂ ಅವರ ಜೊತೆಯಲ್ಲಿ ತಾಯಿ ಅಥವಾ ಪೋಷಕರು ಸಹ ಭಾಗವಹಿಸುವುದರ ಮೂಲಕ ಮಕ್ಕಳಿಗೆ ಮನರಂಜನೆಯನ್ನು ನೀಡುತ್ತಾರೆ.

**೮) ಹಸು ಹುಲಿ ಆಟ:**

ಈ ಆಟದಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳು ಸಾಮೂಹಿಕವಾಗಿ ಲಿಂಗ ಭೇದವಿಲ್ಲದೆ ಭಾಗವಹಿಸುತ್ತಾರೆ. ನಮ್ಮ ಒಂದು ಪ್ರಾಂತ್ಯದಲ್ಲಿ ಈ ಹಸು ಹುಲಿ ಆಟ ಆಧುನಿಕತೆಯ ಸೋಗಿನ ಆಟಗಳು ಬೆಳಕಿಗೆ ಬಂದಿದ್ದರು ಇದು ತನ್ನ ಅಸ್ತಿತ್ವನ್ನು ಉಳಿಸಿಕೊಂಡಿದೆ. ಈ ಆಟವನ್ನು ಆಡುವ ಮುಂಚೆ ಮಕ್ಕಳೆಲ್ಲರೂ ಸೇರಿ ಕೈ ಕೈ ಜೋಡಿಸಿ ಚಪ್ಪಾಳೆ ಹಾಕಿ ಸೋತವನು ಹುಲಿಯಾಗಿ ಮತ್ತೊಬ್ಬ ಹಸು ಆಗಿರುತ್ತಾನೆ. ಮಕ್ಕಳು ಸುತ್ತ ಕೈ ಕೈ ಜೋಡಿಸಿಕೊಂಡು ವೃತ್ತಾಕಾರದಲ್ಲಿ ನಿಂತಿರುತ್ತಾರೆ. ಹಸುವನ್ನು ಕೊಲ್ಲಲು ಅಥವಾ ಹಿಡಿಯಲು ಹುಲಿ ಮುಂದಾದರೆ ಅದನ್ನು ತಪ್ಪಿಸಲು ಹಸುವಾದವನು ಓಡಾಡುತ್ತಾನೆ. ಒಂದು ವೇಳೆ ಹುಲಿ ತಪ್ಪಿಸಿಕೊಂಡು ಹಸುವನ್ನು ಹಿಡಿದರೆ ಆತ ಔಟ್ ಎಂದು ತೀರ್ಮಾನಿಸುತ್ತಾರೆ.

ಹೀಗೆ ಹತ್ತು ಹಲವಾರು ಜನಪದ ಆಟಗಳು ಇಂದಿಗೂ ಉತ್ತನಹಳ್ಳಿಯ ಪರಿಸರದಲ್ಲಿ ಕಂಡುಬರುತ್ತವೆ. ಆದರೆ ಇತ್ತೀಚಿನ ದಿನಗಳಲ್ಲಿ ಬಹುಜನಪ್ರಿಯ ಅಂತಾರಾಷ್ಟ್ರೀಯ ಕ್ರೀಡೆಯಾಗಿರುವ ಕ್ರಿಕೆಟ್, ಮೊಬೈಲ್ ಫೋನುಗಳು, ವೀಡಿಯೋ ಗೇಮ್‌ಗಳಿಂದಾಗಿ ಮಕ್ಕಳು, ಯುವಜನಾಂಗ ಜನಪದ ಕಲೆ, ಆಟಗಳಲ್ಲಿ ಆಸಕ್ತಿ ಕಳೆದುಕೊಳ್ಳುತ್ತಿದ್ದಾರೆ ಎಂಬುದರಲ್ಲಿ ಎರಡು ಮಾತಿಲ್ಲ. ಆದರೂ ಹಳ್ಳಿಗಳ ಉದ್ಧಾರವೇ ದೇಶದ ಉದ್ಧಾರ ಎಂಬುದರಲ್ಲಿ ಸಂಶಯವಿಲ್ಲ. ಗ್ರಾಮೀಣರ ಮುಗ್ಧತೆ, ವಿನಯವಂತಿಕೆ, ನಂಬಿಕೆ, ಆಚರಣೆಗಳು ಭಾರತದ ಸಾಂಸ್ಕೃತಿಕ ಜಗತ್ತಿನ ವಾಸ್ತವಾಂಶಗಳು ಎಂಬುದನ್ನು ಈ ಸಂದರ್ಭದಲ್ಲಿ ನಾನು ಕಂಡುಕೊಂಡಿದ್ದೇನೆ. 'ಉತ್ತನಹಳ್ಳಿ – ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಈ ನಿಬಂಧದಲ್ಲಿ ಗ್ರಾಮೀಣರ ಬದುಕನ್ನು ನನ್ನ ಮಿತಿಯಲ್ಲಿ ನಾನು ಕಟ್ಟುಕೊಡುವ ಸಣ್ಣ ಪ್ರಯತ್ನವನ್ನು ನಡೆಸಿದ್ದಾನೆ.

**ಅಡಿಟಿಪ್ಪಣಿ**

೧. ಅಂಬಳಿಕೆ ಹಿರಿಯಣ್ಣ, ಜಾನಪದ ವೀಕ್ಷಣೆ, ಪುಟ ಸಂಖ್ಯೆ ೧೨೨.

೨. ಪ್ರೊ. ಶ್ರೀಕಂಠ ಕೂಡಿಗೆ, ಜಾನಪದದ ವಿವಿಧ ಮುಖಗಳು, ಪುಟ ಸಂಖ್ಯೆ ೧೮೮.

# ಉಪಸಂಹಾರ

ಕಲೆ ವಿಜ್ಞಾನಗಳೆರಡೂ ಸೇರಿಕೊಂಡು ಒಂದಕ್ಕೊಂದು ಪೂರಕವಾಗಿ ಬೆಳೆಯಬೇಕಾದ ಈ ಸಂದರ್ಭದಲ್ಲಿ ಅವು ವೈರಿಗಳಂತೆ ವರ್ತಿಸುತ್ತಿರುವುದು ತುಂಬ ಅಚ್ಚರಿಯ ಸಂಗತಿಯಾಗಿದೆ. ವಿಜ್ಞಾನದ ಪ್ರಸಾರವಾದ ಸಿನಿಮಾ, ರೇಡಿಯೋ, ದೂರದರ್ಶನಗಳಿಂದ ನಮ್ಮ ಗ್ರಾಮಗಳ ಕಲೆಗಳು ಅಲಕ್ಷ್ಯಕ್ಕೀಡಾಗಿ ಮೂಲೆ ಗುಂಪಾಗಿ ಹೋಗುತ್ತಿರುವುದು ಶೋಚನೀಯ ಸಂಗತಿಯಾಗಿದೆ. ಹಳ್ಳಿಯ ಜನ ತಮ್ಮ ಬದುಕಿನ ಸೆಲೆಗಳಾದ, ಒಡಲಾಳದ ದನಿಗಳಾದ ಹಾಡು, ಕುಣಿತ, ವಾದ್ಯ, ಆಟಗಳನ್ನು ಮದುವೆ ಮಂಗಳ ಕಾರ್ಯಗಳನ್ನು ಮೊಟಕುಗೊಳಿಸಿ ವಿರೂಪಗೊಳಿಸಿ ಅಂತರಂಗ ಬಹಿರಂಗಗಳೆರಡರಲ್ಲೂ ಪಟ್ಟಣದ ತಳುಕು ಬಳುಕಿನ ಮೋಹದ ಬದುಕಿಗೆ ಬೆನ್ನು ಹತ್ತಿ ಈ ದೇಶದ ಸಂಸ್ಕೃತಿಯ ಮೂಲ ಸೆರೆಯಾದ ಹಳ್ಳಿಗಳನ್ನು ಬಿಟ್ಟು ಹೋಗುತ್ತಿರುವುದು ಶೋಚನೀಯವಾದ ಸಂಗತಿ. ಪಟ್ಟಣದವರು ಹಳ್ಳಿಗೆ ಬರಬಾರದೆನ್ನುವ ಹೊತ್ತಿಗೆ ಹಳ್ಳಿಯವರು ಪಟ್ಟಣಕ್ಕೆ ಹೋಗಿ ನೆಲಸಬೇಕೆಂದು ಕನಸು ಕಾಣುತ್ತಿರುವುದು ನಮ್ಮ ದೇಶದ ಬೆಳವಣಿಗೆಗೆ ಮಾರಕವಾಗುತ್ತಿದೆ ಎಂದರೆ ತಪ್ಪಾಗುವುದಿಲ್ಲ. ಹಳ್ಳಿ ನಾಶವಾದರೆ ಪಟ್ಟಣಗಳು ಉಳಿಯಲಾರವು, ಕಲೆ ಸಂಸ್ಕೃತಿ ಬೆಳೆಯಲಾರದು ಈ ದೇಶದ ಸಂಸ್ಕೃತಿ ನಿಂತಿರುವುದು ಹಳ್ಳಿಗಳಲ್ಲಿ ಆದ್ದರಿಂದ ಜಗತ್ತಿನಾದ್ಯಂತ ಹಳ್ಳಿಗಳ ಏಳಿಗೆಗೆ ಶ್ರಮಿಸುವುದು ಅಗತ್ಯವಾದ ಕೆಲಸವಾಗಿದೆ.

ಸಾಂಸ್ಕೃತಿಕವಾಗಿ ಭಾರತ ಶ್ರೀಮಂತ ರಾಷ್ಟ್ರ ಹೇಗೋ ಹಾಗೆ ಹಳ್ಳಿಗಳಿಂದ ಕೂಡಿದ ರಾಷ್ಟ್ರವಾಗಿದೆ. 'ಹಳ್ಳಿಯಿಂದ ದಿಲ್ಲಿ' ಎನ್ನುವ ಮಾತಿನಂತೆ ಹಳ್ಳಿಗಳು ಯಾವುದೇ ರಾಷ್ಟ್ರದ ಬೆನ್ನೆಲುಬು ಎಂದರೆ ಅತಿಶಯೋಕ್ತಿಯಲ್ಲ. ಮೊದಲು ಹಳ್ಳಿಗಳು ಜನಪದ ಕಲೆಗಳ ನೆಲೆಬೀಡಾಗಿದ್ದವು. ಆದರೆ ಆಧುನಿಕತೆಯಿಂದಾಗಿ ಹಳ್ಳಿಗಳ ಕೆಲವು ಸಂಸ್ಕೃತಿ, ಆಚಾರ-ವಿಚಾರ, ಸಂಪ್ರದಾಯ, ನಂಬಿಕೆ ಮುಂತಾದವುಗಳು ಮೂಲ ರೂಪವನ್ನು ಕಳೆದುಕೊಳ್ಳುತ್ತಿರುವುದು ವಿಷಾದನೀಯ ಕರವಾದ ಸಂಗತಿ. ಈ ಮಾತು ಮೈಸೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಉತ್ತನಹಳ್ಳಿಗೂ ಅನ್ವಯಿಸುತ್ತದೆ.

'ಉತ್ತನಹಳ್ಳಿ ಸಾಂಸ್ಕೃತಿಕ ಅಧ್ಯಯನ' ಎಂಬ ಈ ಸಂಶೋಧನ ನಿಬಂಧದಲ್ಲಿ ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿಯನ್ನು ಹೇಳಿದ್ದೇನೆ. ಚಾಮುಂಡಿಯ ಸಹೋದರಿ ಜ್ವಾಲಾಮುಖಿ ದೇವಸ್ಥಾನವಿರುವ ಈ ಗ್ರಾಮ ಇಂದಿಗೂ ಅಪಾರ ಭಕ್ತ ಸಮೂಹವನ್ನು ಆಕರ್ಷಿಸುವ ಗ್ರಾಮಗಳಲ್ಲಿ ಒಂದು. ಈ ದೇವಿ

ನೆಲಸಿರುವ ಕಾರಣದಿಂದಲೇ ಇದಕ್ಕೆ ಉತ್ತನಹಳ್ಳಿ ಎಂದಾಯಿತು ಎಂಬುದು ನಾನು ಕಂಡುಕೊಂಡ ಅಂಶ. ಇಲ್ಲಿನ ಜನರ ಆಚಾರ-ವಿಚಾರ, ನಂಬಿಕೆ ಸಂಪ್ರದಾಯಗಳನ್ನು ಮೂರನೇ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ.

ಇಲ್ಲಿರುವ ದೇವಾಲಯಗಳ ಪ್ರಾಚೀನತೆ, ಅವುಗಳಲ್ಲಿ ಇಂದಿಗೂ ನಡೆದುಕೊಂಡು ಬಂದಿರುವ ಜಾತ್ರಾದಿ ಉತ್ಸವಗಳನ್ನು 'ಜಾತ್ರೆಗಳು ಮತ್ತು ಉತ್ಸವಗಳು' ಎಂಬ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ.

ಶೈಕ್ಷಣಿಕ ಪ್ರಗತಿಯಿಂದಾಗಿ ಇಂದು ಸಾಮಾನ್ಯವಾಗಿ ಉತ್ತನಹಳ್ಳಿಯ ಜನರು ಅಕ್ಷರಸ್ಥರಾಗಿದ್ದು, ವೈಚಾರಿಕತೆಯನ್ನು ಬೆಳೆಸಿಕೊಂಡಿದ್ದರೂ ಸಹ ಕೆಲವು ಬದಲಾವಣೆಗಳೊಂದಿಗೆ ಇಂದಿಗೂ ಹುಟ್ಟಿನಿಂದ ಸಾವಿನವರೆಗೂ ಅನೇಕ ವಿಧಿ ವಿಧಾನ, ಸಂಪ್ರದಾಯ ಮತ್ತು ಸಂಸ್ಕಾರಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿರುವು ದುಂಟು. ಇಲ್ಲಿನ ಜನರು ವಿಧವಾ ವಿವಾಹಕ್ಕೆ ಮುಕ್ತ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಾರೆ. ಇಂದಿನ ಶೈಕ್ಷಣಿಕ ಮತ್ತು ವೈಜ್ಞಾನಿಕ ಪ್ರಗತಿಯಿಂದಾಗಿ ಮೂಢನಂಬಿಕೆಗಳು ತನ್ನ ಮೌಲ್ಯಗಳನ್ನು ಕಳೆದುಕೊಳ್ಳುತ್ತಿವೆ.

ಜನಾಂಗಗಳ ಆಚರಣೆ, ನಂಬಿಕೆ ಇತ್ಯಾದಿ ವಿಚಾರಗಳನ್ನು ಚರ್ಚಿಸುವಾಗ ಪ್ರತಿಯೊಂದು ಜನಾಂಗವು, ಗ್ರಾಮವೂ ಅನನ್ಯ. ಮಾತು, ನಡೆನುಡಿ ಪ್ರಾದೇಶಿಕ ವೈಶಿಷ್ಟ್ಯಗಳಿಂದ ಕೂಡಿದೆ ಎಂಬುದು ಈ ಸಂದರ್ಭದಲ್ಲಿ ಅರಿವಾಯಿತು. ಸಾಂಸ್ಕೃತಿಕ ಅಧ್ಯಯನವೆಂಬ ಕಲ್ಪನೆ ವಿಶಾಲವಾದುದು. ಈ ನಿಟ್ಟಿನಲ್ಲಿ ಈ ಗ್ರಾಮದ ಬಗ್ಗೆ ನಡೆದಿರುವ ಅಧ್ಯಯನವನ್ನು ಸಮೀಕರಿಸಿ ಇಲ್ಲಿರುವ ದೇವಾಲಯಗಳ ಬಗ್ಗೆ, ಜನಪದ ವರ್ಗಗಳ ಬಗ್ಗೆ ಮತ್ತು ಅವರ ಆಚರಣೆಯ ಬಗ್ಗೆ ಮಾಹಿತಿಯನ್ನು ನೀಡಿರುತ್ತೇನೆ. ವಾಸ್ತವವಾಗಿ ಈ ಬಗ್ಗೆ ಒಂದು ಮಹಾಪ್ರಬಂಧವನ್ನೆ ರಚನೆ ಮಾಡಬಹುದು. ಮುಂಬರುವ ದಿನಗಳಲ್ಲಿ ಈ ನಿಟ್ಟಿನಲ್ಲಿ ಸಾಕಷ್ಟು ಕೆಲಸ ನಡೆಯಬೇಕೆಂಬ ಆಶಯ ನನ್ನದು. ಈ ನಿಬಂಧ ಅದಕ್ಕೆ ಪ್ರೇರಣೆ ನೀಡುತ್ತದೆ ಎಂಬುದು ನನ್ನ ಅಭಿಪ್ರಾಯ.

## ಅನುಬಂಧ

**ಪರಾಮರ್ಶನ ಗ್ರಂಥಗಳು**


೧) ಜಾನಪದ ವೀಕ್ಷಣೆ – ಡಾ. ಅಂಬಳಿಕೆ ಹಿರಿಯಣ್ಣ, ಪ್ರಜ್ವಲಪ್ರಕಾಶನ, ಮೈಸೂರು, ೧೯೮೭.

೨) ಕರ್ನಾಟಕ ಜಾತ್ರೆಗಳು, ಸಿ.ಎಸ್. ಶಿವಕುಮಾರಸ್ವಾಮಿ, ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು, ೧೯೮೮.

೩) ಜಾನಪದ ಅಧ್ಯಯನ, ದೇ. ಜವರೇಗೌಡ, ಚೇತನ್ ಬುಕ್ ಹೌಸ್, ಮೈಸೂರು, ೧೯೯೧.

೪) ಜಾನಪದ, ಜಿ.ಎಸ್. ಭಟ್ಟ್, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೩

೫) ಜಾನಪದ ಸಮಾಲೋಚನೆ, ವಿ.ವಿ.ನಾವಡ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೩೯.

೬) ಜಾನಪದ ಮಾರ್ಗ, ಕಲ್ಬುರ್ಗಿ, ಲಕ್ಷ್ಮಿ ಪ್ರಿಟಿಂಗ್ಸ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೧೯೯೫.

೭) ಚಾಮುಂಡಿಸಿರಿ ಚಾಮುಂಡಿ, ಡಾ. ಪಿ.ಕೆ. ರಾಜಶೇಖರ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೨.

೮) ಗ್ರಾಮದೇವತೆಗಳು, ಡಾ. ಸಿದ್ದಲಿಂಗಯ್ಯ, ಅಕ್ಷರ ಪ್ರಕಾಶನ, ಸಾಗರ, ೧೯೯೪.

೯) ಪ್ರಥಮಃ ಪಂಡಿತಾರಾಧ್ಯ.ಎಂ.ಎನ್.ವಿ., ಪ್ರಭೋದ ಪುಸ್ತಕ ಮಾಲೆ, ೧೯೭೯, ಮೈಸೂರು.

೧೦) ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪರಿಷ್ಕೃತ ಸಂಪುಟ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ಮೈಸೂರು.

೧೧) ಕನ್ನಡ ಸಾಹಿತ್ಯ ಕೋಶ, ರಾಜಪ್ಪ ದಳವಾಯಿ, ರಾಘವೇಂದ್ರ ಪ್ರಕಾಶನ, ಬೆಂಗಳೂರು, ೧೯೯೬.

೧೨) ಕಲೆ ಸಂಸ್ಕೃತಿ, ಜ್ಯೋತಿ ಶಂಕರಮೂರ್ತಿ, ನವೋದಯ ಪ್ರಕಾಶನ, ಚಿತ್ರದುರ್ಗ.

## ಮಾಹಿತಿದಾರರು

| ವ್ಯಕ್ತಿ | ಜಾತಿ | ವಯಸ್ಸು |
|---|---|---|
| ಬಿ.ಬಸಪ್ಪ | ಕುರುಬ | ೩೮ |
| ಕರೀಗೌಡ | ಕುರುಬ | ೮೦ |
| ಜವನಮ್ಮ | ಕುರುಬ | ೮೫ |
| ಬೋಗೇಗೌಡ | ಕುರುಬ | ೬೫ |
| ಸಿ. ಜ್ಞಾನೇಶ | ಕುರುಬ | ೪೦ |
| ಕುಳ್ಳಯ್ಯ | ಪರಿಶಿಷ್ಟಜಾತಿ | ೮೦ |
| ರಂಗಯ್ಯ | ಪರಿಶಿಷ್ಟಜಾತಿ | ೬೦ |
| ನಿಜಲಿಂಗಪ್ಪ | ಲಿಂಗಾಯಿತ | ೬೫ |
| ನಿಂಗಪ್ಪ | ಲಿಂಗಾಯಿತ | ೮೦ |
| ಮಹದೇವಪ್ರಸಾದ್ | ಬ್ರಾಹ್ಮಣ | ೬೦ |
| ಸಿಂಗಾಚಾರಿ | ಆಚಾರಿ | ೭೦ |
| ಚಿಕ್ಕಂಡು | ಕುರುಬ | |



ಪ್ರವೇಶ ದ್ವಾರ



ಮಾರಮ್ಮನ ಪಕ್ಕದಲ್ಲಿರುವ
ಶಿವ ದೇವಾಲಯ



ಪೂಜೆ,ತಂಬೀಟನ್ನು ದೇವಾಲಯಕ್ಕೆ ಹೊತ್ತು ಸಾಗುತ್ತಿರುವ ಭಕ್ತರು



ಬಾಯಿ ಬೀಗ  ಹಾಕಿಸಿಕೊಳ್ಳುತ್ತಿರುವುದು



ಬಾಯಿ ಬೀಗ ಹಾಕಿಸಿಕೊಂಡಿರುವ ಭಕ್ತ



ಮಡೆ ಉಯ್ಯುತ್ತಿರುವುದು

